# ಹಬ್ಬಹರಿದಿನ ಹಾಗೂ ವ್ರತಾಚರಣೆ

ಲೇಖಕಿ: ಶ್ರೀಮತಿ ಫಲ್ಗುಣಾಬಾಯಿ ಉಪಾಧ್ಯಾಯ



ಪ್ರಕಾಶಕರು:

**ಶ್ರೀ ವೇದವ್ಯಾಸ ಪ್ರಕಾಶನ**

ಗುರುಸ್ಮೃತಿ ಕಾಂಪ್ಲೆಕ್ಸ್, ರಾಯರ ಮಠದ ಹತ್ತಿರ, ಮಾಳಮಡ್ಡಿ, ಧಾರವಾಡ

# ಹಬ್ಬ ಹರಿದಿನ ಹಾಗೂ ವ್ರತಾಚರಣೆ

ಲೇಖಕಿ :

ಶ್ರೀಮತಿ ಫಲ್ಗುಬಾಯಿ ಉಪಾಧ್ಯಾಯ

ಪ್ರಕಾಶಕರು :

ಶ್ರೀ ವೇದವ್ಯಾಸ ಪ್ರಕಾಶನ

ಗುರುಸ್ಮೃತಿ ಕಾಂಪ್ಲೆಕ್ಸ್,

ರಾಯರಮಠದ ಹತ್ತಿರ, ಮಾಳಮಡ್ಡಿ

ಧಾರವಾಡ

# HABBA HARIDINA MATTU VRATACHARANE

*Written By :* Smt. Phalgubai Upadhya

*Pages :* 88



*Price :* 16/- (Rs. Sixteen Only).

**Published By :**
*Shri Vedavyas Prakashana*
Gurusmrati Complex,
Near Rayarmath, Malamaddi,
DHARWAD580 007.



This Book is published
with financial assistance from
Tirumala Tirupati Devasthanams
under the scheme
"Aid to Publish Religious"

# FOREWORD

This booklet is brought out with a view to help the theistic women folk of Brahmin community to regulate their religious life to the extent possible. Drastic changes in modern life like Higher education, service mindedness, declining faith in religious practices has faded their normal instinct of piety in females. To make them aware of the normal expectations of traditional functions. The author has taken pains to cull out the prescribed procedure, etc. in this regard from authoritative sources like puranas and to present them in a consolidated form in simple and intelligible manner. The prescriptions laid down in the puranas are not difficult to follow if only one minds to attend to them. There is no doubt that it would be quite beneficial if one follows the prescribed procedure sincerely.

Practice before preaching is mostly effective. From this point of view Smt. Phalgubai is really competent to advice her sisterly women because she has herself been following the dictates faithfully and has completed the courses of different Vritas successfully as I know it for many years past. I believe her labours will be rewarded and a fair number of people take advantage of the knowledge and prescriptions, particularly those who have religious bent of mind but are unaware of the detailed procedure.

The tempest of modernity is blowing out the philisophical persuits and traditional practices of yester generations. The 'generation gap' as is being called - is

being widened day by day. This is mainly due to the fact that the people of two generation never live together. While the elders stay secluded - their sons and daughter-in-laws stay in remote places to earn their livelyhood. Thus the younger generation is deprived of the valuable information and details of traditional practices, which they could have easily got had they lived with their elders.

This gap is nicely bridged by Smt. Phalgubai, who has taken pains to put forth all this rituals to be observed all round the year. Any young house wife can refer to this book and observe the procedure without any difficulty. The Karma Yoga as preached by Lord Shri Krishna is translated into day to day practices in this book and if followed scrupulously would bring propiciation of the Lord.


✍ **Vithalrao Navalgund** M.A.
Rtd. Deputy Commissioner &
District Magistrate.

Laxmi Nilaya,
Station Road,
DHARWAD - 7

# ★ ಕೃತಜ್ಞತಾ ಸಮರ್ಪಣೆ ★

ಪೀಠಿಕೆಯಲ್ಲಿ ನಿವೇದಿಸಿದಂತೆ ನಾನು ಈ ಒಳಗಾಗಿ ಪ್ರಕಟಿಸಿದ 'ಸಾಧ್ವೀಸಾಧನಾ ದರ್ಶನ' ಪುಸ್ತಕವನ್ನು ಮೆಚ್ಚಿಕೊಂಡು ಅನೇಕ ಸಾಧ್ವೀ ಸ್ತ್ರೀಯರು ಪತ್ರ ಬರೆದು ಉತ್ತೇಜನ ಕೊಟ್ಟಿದ್ದಲ್ಲದೆ ಹಬ್ಬ ಹರಿದಿನ ಹಾಗೂ ವರ್ಷದಲ್ಲಿ ಬರುವ ಅನೇಕ ವ್ರತ ಹಾಗೂ ಅವುಗಳ ಆಚರಣೆ ಬಗ್ಗೆಯೂ ಒಂದು ಗ್ರಂಥ ಬರೆಯಬೇಕೆಂದು ನನ್ನನ್ನು ಪ್ರೇರಿಸಿದ ಕಾರಣ ಈ ಹೊಸ ಪುಸ್ತಕ ಬರೆಯುವ ಸಾಹಸ ಮಾಡಿದ್ದೇನೆ. ನಾನು ಚಿಕ್ಕಂದಿನಲ್ಲಿ ನನ್ನ ಪೂಜ್ಯ ಅತ್ತೆ, ಮಾವಂದಿರಿಂದ ಕಲಿತ ಅನೇಕ ನಿಯಮ, ವ್ರತ ಹಾಗೂ ಅವುಗಳ ಆಚರಣೆಯಿಂದ ಪ್ರಭಾವಿತಳಾಗಿ ಸಾಧ್ಯವಿದ್ದಷ್ಟು ಆಚರಣೆಗೆ ತಂದುಕೊಂಡದ್ದಲ್ಲದೆ ಸಮಾಜದಲ್ಲಿ ಹಿರಿಯ ಮುತ್ತೈದೆಯರಿಂದಲೂ ಅನೇಕ ವಿಷಯಗಳನ್ನು ತಿಳಿದುಕೊಂಡು ಅದರಂತೆ ನಡೆಸಿದ್ದೇನೆ. ಅವರಿಗೆಲ್ಲ ನಾನು ಅತ್ಯಂತ ಕೃತಜ್ಞಳಾಗಿದ್ದೇನೆ.

ನನ್ನ ಈ ಪುಸ್ತಕವನ್ನು ಓದಿ ಅನುಗ್ರಹ ವಚನವನ್ನು ದಯಪಾಲಿಸಿದ ಉತ್ತರಾಧಿಮಠದ ಶ್ರೀಪಾಂದಗಳವರಾದ ಪೂಜ್ಯ **ಶ್ರೀ ಶ್ರೀ 108 ಶ್ರೀ ಸತ್ಯಾತ್ಮತೀರ್ಥ**ರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಈ ಪುಸ್ತಕಕ್ಕೆ ವಿದ್ವತ್‌ಪೂರ್ಣ ಮುನ್ನುಡಿಯನ್ನು ಬರೆದುಕೊಟ್ಟ ಧಾರವಾಡದ ವಯೋವೃದ್ಧರೂ, ಜ್ಞಾನವೃದ್ಧರೂ ಆದ ಮಾನ್ಯ **ಶ್ರೀ ವಿಠಲರಾವ್ ನವಲಗುಂದ** M.A., ನಿವೃತ್ತ ಡೆಪ್ಯೂಟಿ ಕಮೀಶನರ ಅವರಿಗೆ ನಾನು ನನ್ನ ವಿನಯಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಬೆಂಗಳೂರ ನಿವಾಸಿಯಾದ 'ಮಾಧ್ವ ಸಮಾಜ ಸೇವಾರತ್ನ' 'ರಾಷ್ಟ್ರಭಾಷಾ ಪ್ರವೀಣೆ **ಡಾ. ಶ್ರೀಮತಿ ರುಕ್ಮಿಣಿ ಗಿರಿಮಾಜಿ** M.A., Ph.D., ನಿವೃತ್ತ, ಕಾಲೇಜ ಭಾಷಾಶಾಸ್ತ್ರ ಅಧ್ಯಾಪಕಿ, ಬೆಂಗಳೂರು, ಅವರು ನನ್ನ ಈ ಪುಸ್ತಕವನ್ನು ಓದಿ ಸಂತುಷ್ಟರಾಗಿ ವಿದ್ವತ್‌ಪೂರ್ಣವಾದ ತಮ್ಮ ಅಭಿಪ್ರಾಯವನ್ನು ಬರೆದು ಕೊಟ್ಟಿದ್ದಲ್ಲದೆ ಬೇಗ ಈ ಪುಸ್ತಕ ಮುದ್ರಿತವಾಗುವಂತೆ ಆಶೀರ್ವದಿಸಿದ್ದಾರೆ. (ಅವರ ಅಭಿಪ್ರಾಯವನ್ನು ಇಲ್ಲಿ ಮುದ್ರಿಸಿದ್ದೇನೆ). ಅವರಿಗೆ ನಾನು ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬೆಂಗಳೂರಿನಲ್ಲಿ ಮತ್ತೀಕೇರಿ ನಿವಾಸಿ ಹೈಕೋರ್ಟಿನ ಸುಪ್ರಸಿದ್ಧ ಅಡ್ವೊಕೇಟರಾಗಿದ್ದ ಶ್ರೀಯುತ ಜಿ. ಜಿ. ನಾಗರಾಜರಾವ್ ಅವರ ಧರ್ಮಪತ್ನಿ **ಶ್ರೀಮತಿ ಶ್ಯಾಮಲಾಬಾಯಿ ನಾಗರಾಜ** ಅವರ ಆಗ್ರಹವಿಲ್ಲದಿದ್ದರೆ ನಾನು ಇಷ್ಟು ಬೇಗ ಈ ಪುಸ್ತಕ ಬರೆಯುವದು ಸಾಧ್ಯವಾಗುತ್ತಿರಲಿಲ್ಲ. ಅವರಿಗೆ ನನ್ನ ಸವಿನಯ ವಂದನೆಗಳನ್ನು ಸಲ್ಲಿಸುತ್ತೇನೆ. ಮುಖ್ಯವಾಗಿ ನನ್ನ ಪುಸ್ತಕವು ಮುದ್ರಣ ಕಾಣಲು ಕಾರಣರಾದ ತಿರುಪತಿಯ ದೇವಸ್ಥಾನದ ದಾಸಸಾಹಿತ್ಯ ವಿಭಾಗದ ಮುಖ್ಯಸ್ಥರಾದ **ಪಂ|| ಶ್ರೀ ಕೆ. ಅಪ್ಪಣ್ಣಾಚಾರ** ಅವರಿಗೆ ನನ್ನ ಅನಂತ ಕೃತಜ್ಞತೆಗಳು. ದಾಸಸಾಹಿತ್ಯ ಯೋಜನೆಯಂತೆ ಈ ಪುಸ್ತಕದ ಸಾರ ಸಂಗ್ರಹವನ್ನು ಇಂಗ್ಲೀಷಿನಲ್ಲಿ ತಯಾರಿಸಿ ಕೊಟ್ಟಿದ್ದಲ್ಲದೆ ಅನೇಕ ಸಲಹೆ-ಸೂಚನೆಗಳನ್ನು ಮಾಡಿ ಉಪಕರಿಸಿದ **ಪಂ|| ಶ್ರೀ ಗೋವಿಂದರಾವ್ ವಿಠ್ಠಲರಾವ್ ನವಲಗುಂದ** B.E. (ಕರ್ನಾಟಕ ಸರಕಾರದ ನೀರಾವರಿ ಇಲಾಖೆಯಲ್ಲಿ ಕಾರ್ಯ ನಿರ್ವಾಹಕ ಇಂಜಿನೀಯರ ಅಂತಾ ಸೇವೆ ಸಲ್ಲಿಸುತ್ತಿರುವವರು) ಅವರಿಗೆ ಹಾಗೂ ಈ ಪುಸ್ತಕವನ್ನು ಸುಂದರವಾಗಿ ಮುದ್ರಿಸಿಕೊಟ್ಟ **ಶ್ರೀ ಪಿ. ಆರ್. ಮುತಾಲಿಕ ದೇಸಾಯಿ** ಅವರಿಗೆ ನನ್ನ ಅನಂತ ಕೃತಜ್ಞತೆಗಳು.

ಈ ಪುಸ್ತಕವನ್ನು ಬರೆಯಲು ಎಲ್ಲ ರೀತಿಯಿಂದ ಮಾರ್ಗದರ್ಶನ ಮಾಡಿದ ನನ್ನ ಪೂಜ್ಯ ಪತಿ ಶ್ರೀ ಕೆ. ಎಸ್. ಉಪಾಧ್ಯೆ ಅವರಿಗೆ ನನ್ನ ಅನಂತ ಪ್ರಣಾಮಗಳು

**ಧಾರವಾಡ** **ಕುಂ.||ಸೌ||ಫಲ್ಗುಬಾಯಿ ಕೃ. ಉಪಾಧ್ಯೆ**

**14-1-1998**

# ಅನುಗ್ರಹ ವಚನ

ॐ

॥ SRI DIGVIJAYARAMO VIJAYATE ॥


## SRI SRI SATYATMATEERTHA SWAMIJI

SRIMAT JAGADGURU MADHWACHARYA MOOLA MAHA SAMSTHANA UTTARADI MUTT

Jayatheertha Vidyapeetha, Poojamandir, 5th Cross, Shankarapuram, BANGALORE - 560 004. Tel : 6678726


---

4-4-97

॥श्रीः॥

ತಾಯಿಯೇ ನಿಜವಾದ ಗುರು. ಮಕ್ಕಳಿಗೆ ಶಿಕ್ಷಣ ಕೊಡಬೇಕಾದರೆ ತಾಯಿಯಾದವ
ಮೊದಲಿಗೆ ಉತ್ತಮವಾದ ಶಿಕ್ಷಣವನ್ನು ಪಡೆಯಬೇಕು. ಈ ದೃಷ್ಟಿಯಲ್ಲಿ
ಸೌ.ಫಲ್ಗುಣಿಬಾಯಿ ಉಪಾಧ್ಯೆ ಇವರು ಒಳ್ಳೆಯ ಪ್ರಯತ್ನವನ್ನು ಮಾಡಿದ್ದಾರೆ.
ಆಚರಣೆಯೇ ಧರ್ಮದ ಮೂಲ. ಆಚರಣೆಯ ರಕ್ಷಣೆಗೆ ಮುಖ್ಯವಾಗಿ ಜ್ಞಾನ ಬೇಕು.
ಇಂತಹ ಆಚರಣೆಯ ಸಾಮಾನ್ಯ ಪರಿಚಯಕ್ಕೆ "ಹಬ್ಬ-ಹರಿದಿನಗಳು ಮತ್ತು ಆಚರಣೆ
ಎಂಬ ಈ ಗ್ರಂಥ ಸಹಾಯಕಾರಿಯಾಗಬಹುದು. ದೇವರು ಇದೇ ರೀತಿ ಇವರಿಂದ ಅನೇ
ಗ್ರಂಥಗಳನ್ನು ಬರೆಸಿ ಸೇವೆಯನ್ನು ತೆಗೆದುಕೊಳ್ಳಲಿ.

श्रीसत्यात्मतीर्थ

# ಅಭಿಪ್ರಾಯ

**SRI**

Vidya Vachaspathi

*Dr. Smt. Rukmini Girimaji* M.A (Karnada)
M.A (Hindi)
Ph.d – in Hindi from Bhagalpur University BIHAR

- Rashtra Bhasha Praveen Lecturer Corporation College
- Kannada & Hindi Writer (in languages) B'lore.
- President, Akhila Bharatha Madhwa Maha Mandal - Woman's wing

---

BANGALORE
Date. 2-2-97

ಕು.ಸೌ. ಫಲ್ಗುಣಾಬಾಯಿಯವರ "ಹಬ್ಬ, ಹರಿದಿನ, ವ್ರತ ನಿಯಮಗಳು ಹಾಗೂ ಆಚರಣೆ" ಯೆಂಬ ಪುಸ್ತಕದ ಹಸ್ತ ಪ್ರತಿಯನ್ನು ನಾನು ಆಮೂಲಾಗ್ರವಾಗಿ ಓದಿದೆ. ಎಲ್ಲಿಯೂ ಬೇಸರವಾಗದೆ ಸುಲಲಿತವಾಗಿಯೂ, ರಂಜಕವಾಗಿಯೂ, ಉದ್ಬೋಧಕವಾಗಿಯೂ ಕಂಡಿತು. ಈಗಿನ ಜನಾಂಗಕ್ಕೆ ಇಂಥದೊಂದು ಪುಸ್ತಕದ ಅವಶ್ಯಕತೆ ಖಂಡಿತವಾಗಿಯೂ ಇದೆ.

ಇದಕ್ಕೆ ಮೊದಲು ನಾನು ಶ್ರೀಮತಿಯವರ "ಸಾಧ್ವಿ-ಸಾಧನಾದರ್ಶ" ಎಂಬ ಪುಸ್ತಕವನ್ನು ನೋಡಿದೆ. ಬಹಳ ಸರಳವಾದ ರೀತಿಯಲ್ಲಿ ವೈಷ್ಣವ ಮಹಿಳೆಯರು ಆಚರಿಸಬೇಕಾದ ನಿಯಮಗಳನ್ನು ಅವರು ವೈಜ್ಞಾನಿಕ ಹಿನ್ನೆಲೆಯನ್ನು ಬಹಳ ಚೆನ್ನಾಗಿ ನಿರೂಪಣೆ ಮಾಡಿದ್ದಾರೆ.

ನಾವು ಅಂದರೆ ಅಖಿಲಭಾರತ ಮಾಧ್ವ ಮಹಾಮಂಡಲದ ಶಾಖೆಯವರು ಹದಿಹರೆಯದವರಿಗಾಗಿ ನಡೆಸುವ ಧಾರ್ಮಿಕ ಶಿಕ್ಷಣ ಶಿಬಿರದಲ್ಲಿ ಈ ಪುಸ್ತಕವು ಹುಡುಗಿಯರಿಗೆ ಬಹಳ ಸಂತೋಷವನ್ನುಂಟು ಮಾಡಿತು. ಪೀಠಿಕೆಯಲ್ಲಿ ಹೇಳಿರುವಂತೆ ಈಗಿನ ಪರಿಸರದಲ್ಲಿ ನಮ್ಮ ಸಂಸ್ಕೃತಿ-ಆಚಾರ-ವಿಚಾರಗಳನ್ನು ನಡೆಸಲು ಕಷ್ಟವೆಂದು ತಿಳಿದಿದ್ದ ಆ ಹೆಣ್ಣು ಮಕ್ಕಳ ಮಧ್ಯವಯಸ್ಸಿನ ತಾಯಂದಿರು ಬರಿಯ ಕಿಶೋರಿಯರಿಗೆ ಮಾತ್ರ ಶಿಬಿರವನ್ನು ಏರ್ಪಡಿಸುತ್ತೀರಿ. ನಮಗೂ ಯಾವುದೂ ತಿಳಿದಿಲ್ಲ, ದಯವಿಟ್ಟು ನಮಗೂ ಶಿಬಿರಗಳನ್ನು ನಡೆಸಿ ಎಂದಾಗ ನಮ್ಮ ಸಂಸ್ಕೃತಿಯೇ ಮುಳುಗಿ ಹೋಗುತ್ತಲಿದೆ ಎಂದು ತಿಳಿದಾಗ, ಎಲ್ಲಿಂದಲೋ ಆಶಾಕಿರಣವೊಂದು ದೊರೆತಂತಾಯಿತು. ಈಗ ಶಿಬಿರದಲ್ಲಿನ ಮಕ್ಕಳೇ ಏಕಾದಶಿ ಉಪವಾಸ ಮಾಡುವಾಗ ಅವಳ ತಾಯಿ, ಅನ್ನವನ್ನು ತಿನ್ನಲು ಸಾಧ್ಯವೇ ಹೀಗೆ ಅನೇಕ ಉದಾಹರಣೆಗಳಿವೆ.

ಹಿಂದೆ ಕು|| ಸೌ|| ಮೋಡ್ಲಿ ಸುಧಾಬಾಯಿಯವರು ತಮ್ಮ ಕಪಿಲ ಕೀರ್ತನ ಮಂಜರಿ ಎಂಬ ಪುಸ್ತಕದಲ್ಲಿ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಬರುವ ಹಬ್ಬ, ಹುಣ್ಣಿಮೆಗಳನ್ನು ಆಚರಣೆಯ ವಿಧಾನವನ್ನೂ ತಿಳಿಸಿದ್ದರು. ಮತ್ತೆ ಅವರೇ ಚಾತುರ್ಮಾಸದ ಬಗೆಗೂ ಬರೆದರು. ನಂತರ ಮ|| ರಾ|| ಮ|| ಶಾ|| ಸಂ. ಶ್ರೀಯುತ ಪುಷ್ಕರ ಪ್ರಸಾದರ ಪುಸ್ತಕವೂ ಹೊರ ಬಂದಿತು. ಆದರೆ ಶ್ರೀಮತಿಯವರ ಈಗಿನ ಈ ಪುಸ್ತಕ ಹುಡುಗಿಯರಿಗಾಗಲೀ, ಯುವತಿಯರಿಗಾಗಲೀ ಬಹಳ ಬೋಧಪ್ರದವಾಗಿದೆ. ಶ್ರೀಮತಿ. ಫಲ್ಗುಣಿಬಾಯಿಯವರು ಹಬ್ಬ ಹರಿದಿನಗಳ ಹನ್ನೆಲೆ, ವೈಶಿಷ್ಟ್ಯ, ಆಚರಿಸುವ ವಿಧಾನ, ಅವರಿಂದ ದೊರಕುವ ಆನಂದ ಮತ್ತು ವಿಶಿಷ್ಟ ಹಬ್ಬಗಳಲ್ಲಿ ಭಕ್ಷ್ಯಗಳನ್ನು ತಯಾರಿಸುವ ವಿಧಾನ ಇದೆಲ್ಲವನ್ನೂ ವಿಸ್ತಾರವಾಗಿ ವರ್ಣಿಸಿರುವುದರಿಂದ ಎಲ್ಲರಿಗೂ ಇದು ಬಹಳ ಅನುಕೂಲವಾಗಿದೆ. ಇಷ್ಟೇ ಅಲ್ಲದೆ ವಿಶೇಷ ಮಾಹಿತಿಯಲ್ಲಿ ಚಾತುರ್ಮಾಸದಲ್ಲಿ ಕೊಡಬೇಕಾದ ದಾನಗಳ ವಿವರ, ಸಾಧ್ವಿಯರು ಅನುಸರಿಸಬೇಕಾದ ನಿಯಮಗಳು, ವಿಷ್ಣುಪಂಚಕ ವ್ರತಾಚರಣೆಯ ವಿಧಾನ, ಶುಕ್ಲ ದ್ವಾದಶಿ, ಕೃಷ್ಣಪಕ್ಷ ದ್ವಾದಶಿ, ಪೂರ್ಣಿಮಾ, ಅಮಾವಾಸ್ಯೆ ಮತ್ತು ಶ್ರವಣ ನಕ್ಷತ್ರದಲ್ಲಿ ಅರ್ಘ್ಯ ಕೊಡುವಾಗ ಉಚ್ಚರಿಸಬೇಕಾದ ದೇವತೆಗಳ ಹೆಸರು ಎಲ್ಲವನ್ನೂ ವಿಸ್ತಾರವಾಗಿ ಹೇಳಿರುವುದರಿಂದ, ಪುರೋಹಿತರು ಸಿಗದಿದ್ದಾಗ ಏನೂ ತೊಂದರೆಯಾಗದು ಮತ್ತು ಅಧಿಕಮಾಸದ ಬಗ್ಗೆ ಬಹಳ ಉಪಯುಕ್ತ ಮಾಹಿತಿಗಳನ್ನು ಕೊಟ್ಟಿದ್ದಾರೆ.

ಒಟ್ಟಾರೆ ಚೈತ್ರ ಮಾಸದಿಂದ ಆರಂಭವಾಗುವ ಹಬ್ಬಗಳ ಸವಿಸ್ತಾರ ಮಾಹಿತಿಯ ಜೊತೆಗೆ ಆಯಾ ತಿಂಗಳಲ್ಲಿ ಬರುವ ವ್ರತಗಳ ಆಚರಣೆ, ಸ್ನಾನಾದಿಗಳನ್ನು ತಿಳಿಸಿರುವುದರಿಂದ ಮಾಧ್ವ ಸ್ತ್ರೀ ಜನಾಂಗದ ಆಬಾಲವೃದ್ಧರವರೆಗೂ ಇದು ಬಹಳ ಮಹತ್ವವುಳ್ಳ ಪುಸ್ತಕವಾಗಿದೆ.

ಕು|| ಸೌ|| ಫಲ್ಗುಣಿಬಾಯಿಯವರು ಒಬ್ಬ ನಿಷ್ಠಾವಂತ, ಸಾತ್ವಿಕ ಸ್ವಭಾವದ, ಸೌಜನ್ಯಶೀಲ ಮಹಿಳೆ. ಇವರು ತಾವು ಹಿರಿಯರ ಮಾರ್ಗದರ್ಶನದಲ್ಲಿ ಚಿಕ್ಕ ವಯಸ್ಸಿನಿಂದ ಇದುವರೆಗೂ ನಡೆಸಿಕೊಂಡು ಬಂದ ಮತ್ತು ಇಂದಿಗೂ ನಡೆಸಿಕೊಂಡು ಬರುತ್ತಿರುವ, ಈ ಆಚರಣೆಗಳ ಬಗ್ಗೆ ಸ್ವಾನುಭವದಿಂದ ಬರೆದ ಮಾಹಿತಿಗಳು ಇವಾಗಿರುವುದರಿಂದ, ಪುಸ್ತಕವನ್ನು ಓದುತ್ತಿದ್ದರೆ, ಯಾರೋ ಹಿರಿಯರು ನಮ್ಮೆದುರಿಗೇ, ನಮ್ಮ ಕೈಯಿಂದ ಈ ವ್ರತಗಳನ್ನು ಮಾಡಿಸುತ್ತಿದ್ದಾರೋ ಎಂಬ ಸಹಜ ಭಾವನೆ ಬರುವದು.

ನಮ್ಮ ಕನ್ನಡ ಜನಾಂಗದ ವೈಷ್ಣವ ಮಹಿಳೆಯರು ಇದರ ಸದುಪಯೋಗ ಪಡೆದುಕೊಂಡು, ನಮ್ಮ ಸಂಸ್ಕೃತಿಯನ್ನು ಬೆಳೆಸಿ ತನ್ಮೂಲಕ ಭಗವಂತನ ಕೃಪೆಗೆ ಪಾತ್ರರಾಗಲಿ ಎಂದು ಹಾರೈಸುತ್ತೇನೆ. ಅಲ್ಲದೆ ಕು.ಸೌ. ಫಲ್ಗುಣಿಬಾಯಿಯವರು ಇನ್ನೂ ಇಂತಹ ಅನೇಕ ಪುಸ್ತಕಗಳನ್ನು ರಚಿಸಿ ಸ್ತ್ರೀಯರಿಗೆ ಮಾರ್ಗದರ್ಶನ ಮಾಡಲಿ. ಇದಕ್ಕಾಗಿ

ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತನಾದ ಶ್ರೀ ಲಕ್ಷ್ಮೀ ರಮಣನು ಈ ಮಹಾ ಸಾಧ್ವಿಗೂ, ಅವರಿಗೆ ಅನವರತ ಸಹಕಾರ ನೀಡುತ್ತಿರುವ ಅವರ ಪತಿವರ್ಯರಾದ ಶ್ರೀ. ಉಪಾಧ್ಯೆ ಅವರಿಗೂ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು, ಅವರಿಂದ ಸಮಾಜಕ್ಕೆ ಇನ್ನೂ ಹೆಚ್ಚಿನ ಸಾಂಸ್ಕೃತ ಸೇವೆಯನ್ನು ಮಾಡಿಸಲಿ ಎಂದು ಶ್ರೀಹರಿಯನ್ನು ಅತಿ ನಮ್ರಳಾಗಿ ಪ್ರಾರ್ಥಿಸುತ್ತೇನೆ. ಈ ಪುಸ್ತಕವನ್ನು ಓದಿ ನನಗೆ ಅನ್ನಿಸಿದ ನಾಲ್ಕು ಮಾತುಗಳನ್ನು ಬರೆಯಲು ಅವಕಾಶ ಮಾಡಿಕೊಟ್ಟ ಫಲ್ಗುಣಾಬಾಯಿಯವರಿಗೂ ಅವರ ಪತಿವರ್ಯ ಉಪಾಧ್ಯೆಯವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ರುಕ್ಮಿಣೀ ಗಿರಿಮಾಜಿ
2-2-1997

296, ಮೊದಲ ಮಹಡಿ
ಹತ್ತನೇ ಮುಖ್ಯರಸ್ತೆ, ಮೂರನೇ ಅಡ್ಡರಸ್ತೆ.
ಗೋಕುಲ ಮೊದಲ ಹಂತ, ಎರಡನೇ ಮುಖ್ಯ
ಬೆಂಗಳೂರು - 560 054

# ಹಬ್ಬ-ಹರಿದಿನ ಹಾಗೂ ವ್ರತಾಚರಣೆ

— ಲೇಖಕಿ —

ಶ್ರೀಮತಿ ಫಲ್ಗೂಬಾಯಿ. ಕೃ. ಉಪಾಧ್ಯೆ

---

## : ಪೀಠಿಕೆ :

ಸಾಮಾನ್ಯವಾಗಿ ವರ್ಷದ ಹನ್ನೆರಡು ತಿಂಗಳಲ್ಲಿ ಬರುವ ಹಬ್ಬ, ಹರಿದಿನ, ವ್ರತ-ನಿಯಮಗಳು, ಮಹಾಮಹಿಮರ ಆರಾಧನೆಗಳು ಸುಸಂಸ್ಕೃತ ಮನೆತನದ ಎಲ್ಲರಿಗೂ ಗೊತ್ತಿರುವ ವಿಷಯ. ಪೂರ್ವಕಾಲದಿಂದಲೂ ತಮ್ಮ ತಮ್ಮ ಮನೆಗಳಲ್ಲಿ ಹಿರಿಯರು ಆಚರಿಸುತ್ತ ಬಂದಿರುವ ಈ ಧರ್ಮ ಕಾರ್ಯಗಳು ನಡೆಯುತ್ತಲೇ ಇವೆ. ಆದರೆ ಇತ್ತೀಚಿನ ದಿನಗಳಲ್ಲಿ ಮೊದಲಿನಂತೆ ಅವಿಭಕ್ತ ಕುಟುಂಬಗಳು ಇರುವದೇ ಅಪರೂಪವಾಗಿದೆ. ಪಿತ್ರಾರ್ಜಿತ ಆಸ್ತಿಯಾದ ಹೊಲ-ಮನೆಗಳಿಂದ ಬರುವ ಉತ್ಪನ್ನದಿಂದ ಜೀವನ ಸಾಗಿಸುವ ಪದ್ಧತಿ ಇಲ್ಲವಾಗಿದೆ. ಪ್ರತಿಯೊಬ್ಬರೂ ಹೊಟ್ಟೆ ಪಾಡಿಗಾಗಿ ಒಂದಿಲ್ಲ ಒಂದು ಉದ್ಯೋಗ ಹುಡುಕಿಕೊಂಡು ದೇಶದ ಯಾವುದೇ ಭಾಗದಲ್ಲಿಯಾದರೂ ಜೀವಿಸಬೇಕಾದ ಸ್ಥಿತಿ ಬಂದಿದೆ. ಹೀಗಾಗಿ ತಂದೆ-ತಾಯಿಗಳು-ಹಿರಿಯರು ಒಂದು ಕಡೆ, ಮಕ್ಕಳು ಒಂದು ಕಡೆ ಇರಬೇಕಾದ ಅನಿವಾರ್ಯ ಪ್ರಸಂಗ ಉಂಟಾಗಿದೆ. ಹೊಸ ಪೀಳಿಗೆಗಳಿಗೆ ತಮ್ಮ ಹಿರಿಯರಿಂದ ನಡೆದು ಬಂದ ಹಬ್ಬ, ಹುಣ್ಣಿವೆಗಳ ಆಚರಣೆಯ ಸಾಮಾನ್ಯ ಕಲ್ಪನೆ ಇದ್ದರೂ ಸಮಯದ ಅಭಾವ, ಮುಖ್ಯವಾಗಿ ಸದ್ಯದ ವಾತಾವರಣದಿಂದ ನಿತ್ಯ ನೈಮಿತ್ತಿಕ ಆಚರಣೆ ಜೊತೆಗೆ ಆಗಾಗ್ಗೆ ಆಚರಿಸಬೇಕಾದ ಹಬ್ಬ-ಹರಿದಿನಗಳನ್ನು ನಡೆಯಿಸಿಕೊಂಡು ಬರುವದೇ ಕಷ್ಟವಾಗಿದೆ. 10-12 ವರ್ಷಗಳಿಂದೀಚೆಗಂತೂ ನಮ್ಮ ಸಮಾಜದಲ್ಲಿ ಇದು ಎದ್ದು ಕಾಣುತ್ತದೆ. ಆದರೆ ಸಂಸ್ಕಾರ ಇದ್ದ ಅನೇಕ ಕುಟುಂಬಗಳಿಗೇನು ಕಮ್ಮಿ ಇಲ್ಲ. ಧರ್ಮದಲ್ಲಿ ಅವರಿಗೆ ಇರುವ ಶ್ರದ್ಧೆ, ಇಂಥ ವಾತಾವರಣದಲ್ಲಿ ಅವರನ್ನು ಕಾಡುತ್ತದೆ. ಹಿಂದೆ ಒಂದೊಂದು ಮನೆತನದವರಿಗೂ, ಒಬ್ಬ ಪುರೋಹಿತರು ಮಾರ್ಗದರ್ಶಕರಾಗಿ ಇರುತ್ತಿದ್ದರು. ಈಗಿನ ಯಾಂತ್ರಿಕ ಯುಗದಲ್ಲಿ ಅದು ಅಸಾಧ್ಯವಾಗಿದೆ. ದೇಶದಲ್ಲಿ ಈ ಹಬ್ಬ-ಹುಣ್ಣಿವೆ ಆಚರಣೆಯ ಪದ್ಧತಿಗಳಲ್ಲಿ ಕೆಲವು ಬದಲಾವಣೆಯನ್ನು ನಾವು ಕಾಣುತ್ತೇವೆ. ಕರ್ನಾಟಕದಲ್ಲಿಯೇ ಹಳೆಯ ಮೈಸೂರು ಪ್ರಾಂತ, ಉತ್ತರ ಕರ್ನಾಟ ಪ್ರದೇಶಗಳಲ್ಲಿ ಈ ಆಚರಣೆಗಳಲ್ಲಿ ಅಂತರವಿದೆ. ಇನ್ನು ಮಹಾರಾಷ್ಟ್ರ ಪ್ರದೇಶವಾದ ಪುಣೆ, ಮುಂಬೈಗಳಲ್ಲಿ, ಉತ್ತರ ಪ್ರದೇಶದಲ್ಲಿ ಅದರಂತೆ ತಮಿಳು-ತೆಲುಗು ಪ್ರದೇಶಗಳಲ್ಲಿ ಹಬ್ಬಗಳ ಆಚರಣೆಯಲ್ಲಿಯ ಅಂತರ ನಮಗೆ ಕಾಣುತ್ತದೆ. ನಮ್ಮ ಕರ್ನಾಟಕದ ಅನೇಕ

ಸಂಸಾರಗಳು ಪುಣೆ, ಮುಂಬೈಗಳಲ್ಲಿ ಉದ್ಯೋಗ ಹುಡುಕಿಕೊಂಡು ಹೋದಷ್ಟು ನೂರಾರು ವರ್ಷಗಳಿಂದ ಅಲ್ಲಿಯೇ ಜೀವನ ಸಾಗಿಸುತ್ತಿರುವುದರಿಂದ ಸ್ವಾಭಾವಿಕವಾಗಿ ಅಲ್ಲಿಯ ಸ್ಥಳೀಯ ಜನರು ಆಚರಿಸುವ ಪದ್ಧತಿಗಳೇ ಅನೇಕ ಕರ್ನಾಟಕದವರಿಗೂ ರೂಢಿಯಾಗಿರುವುದನ್ನು ನಾವು ಗುರುತಿಸಬಹುದು. ಆದರೂ ಧರ್ಮದ ಚೌಕಟ್ಟಿನಲ್ಲಿ ಬೆಳೆದು ಬಂದ ಅನೇಕ ಮಾಧ್ವ ಸಂಸಾರಗಳು ಕಷ್ಟಪಟ್ಟು ಧರ್ಮಾಚರಣೆ ಮಾಡುತ್ತಿರುವವರನ್ನು ನಾವು ನೋಡುತ್ತೇವೆ. ಸ್ವಲ್ಪ ಮಾರ್ಗದರ್ಶನ ಸಿಕ್ಕರಾಯಿತು. ಚಾಚೂ ತಪ್ಪದೇ ಅವರು ಧರ್ಮ-ಕರ್ಮಗಳನ್ನು ಮಾಡುವುದರಲ್ಲಿ ಹಿಂದೆ ಬೀಳಲಿಕ್ಕಿಲ್ಲ. ಮುಂಬಯಿ ನಗರದಲ್ಲಿ ಪೂಜ್ಯ ಪಂ. ಮಹಾಮುಲಿ ಅವರ ವಿದ್ಯಾಪೀಠದಿಂದ ಅನೇಕ ಮಾಧ್ವರು ಪ್ರಯೋಜನ ಪಡೆಯುತ್ತಿದ್ದಾರೆ. ಆದರೆ ವಾರದಲ್ಲಿ ಒಂದು ಸಲವಾದರೂ ವಿದ್ಯಾಪೀಠಕ್ಕೆ ಹೋಗಿ ಬರುವುದೂ ಮುಂಬೈ ನಗರದಲ್ಲಿ ದೊಡ್ಡ ಸಾಹಸದ ಕೆಲಸವೇ ಆಗಿದೆ. ಹೀಗಾಗಿ ಮನೆಯಲ್ಲಿ ಮಹಿಳೆಯರಿಗೆ ಹಬ್ಬ-ಹರಿದಿನಗಳನ್ನು ಆಚರಿಸುವ ಬಗ್ಗೆ ಪೂರ್ಣ ಮಾಹಿತಿ ಕೊಡುವ ಒಂದು ಪುಸ್ತಕವು ಇದ್ದರೆ ಈ ಸಮಸ್ಯೆ ಪರಿಹಾರವಾದೀತೆಂದು ಮುಂಬೈ ನಗರದಲ್ಲಿ ನೆಲೆಸಿದ ಅನೇಕ ಮಹಿಳೆಯರು ನನ್ನ "ಸಾಧ್ವಿಸಾಧನ ದರ್ಶ" ಪುಸ್ತಕ ಓದಿ ನನಗೆ ಅಂಥದೊಂದು ಪುಸ್ತಕ ಬರೆಯಲು ಸೂಚನೆ ಮಾಡಿದ್ದಾರೆ. ಅದರಂತೆ ಬೆಂಗಳೂರಿನಲ್ಲಿ ನನ್ನ ಪುಸ್ತಕ ಓದಿದ ಅನೇಕ ಮಹಿಳೆಯರಿಂದಲೂ ಸೂಚನೆಗಳು ಬಂದಿವೆ.

ಮತ್ತೀಕೆರೆ ಬಡಾವಣೆಯಲ್ಲಿ ನೆಲೆಸಿರುವ ಹೈಕೋರ್ಟ್ ಅಡ್ವೋಕೇಟರಾಗಿದ್ದ ಶ್ರೀ ಜಿ.ಜೆ.ನಾಗರಾಜರಾವ್ ಅವರ ಧರ್ಮಪತ್ನಿ ಶ್ರೀಮತಿ ಶ್ಯಾಮಲಾಬಾಯಿ ನಾಗರಾಜ ಹಾಗೂ ಈಗ ಅಮೇರಿಕಾ ದೇಶದಲ್ಲಿ ನೆಲೆಸಿದ ಅವರ ಸಹೋದರ ಶ್ರೀ ಎಸ್.ಜಿ.ಮಾಧವರಾವ್ ಅವರನ್ನು ಇಲ್ಲಿ ಹೆಸರಿಸಬೇಕು. ನಾನು ಬರೆದ "ಸಾಧ್ವೀಸಾಧನಾದರ್ಶ" ಪುಸ್ತಕವನ್ನು ಅವರು ಓದಿ ಅದು ಆ ದೇಶದಲ್ಲಿ ನೆಲೆಸಿದ ಕನ್ನಡ ದೇಶದವರಿಗೆ ಬಹಳೇ ಉಪಯುಕ್ತವಾಗಿದೆಯೆಂದೂ, ಇದೇ ಪುಸ್ತಕವನ್ನೇ ಜೆರಾಕ್ಸ್ ಮಾಡಿಸಿ ತಮ್ಮ ಅಕ್ಕನಿಗೆ ಓದಲು ಕಳಿಸಿದ್ದಲ್ಲದೆ ನನಗೆ ಅಭಿನಂದನೆಗಳನ್ನು ಸಲ್ಲಿಸಿ ಪತ್ರ ಬರೆದು ಮುದ್ರಿಸಿದಲ್ಲಿ ಅಲ್ಲಿ ನೆಲೆಸಿದ ಕನ್ನಡಿಗರಿಗೆ ಬಹಳೇ ಉಪಕಾರವಾಗುವದೆಂದು ತಿಳಿಸಿದ್ದಾರೆ.

ಮುಖ್ಯವಾಗಿ ಧರ್ಮಾಚರಣೆಯಲ್ಲಿ ಶ್ರದ್ಧೆಯುಳ್ಳವರಿಗೂ ದೇಶದ ಅನೇಕ ಸ್ಥಳದಲ್ಲಿ ವಾಸವಾಗಿದ್ದ ಆಧುನಿಕ ಗೃಹಿಣಿಯರಿಗೂ ಅನುಕೂಲವಾಗುವಂತೆ ಎಂಥ ಪರಿಸ್ಥಿತಿಯಲ್ಲಿಯೂ ವ್ರತ-ನಿಯಮ, ಹಬ್ಬ-ಹರಿದಿನಗಳನ್ನು ಆಚರಿಸಿಕೊಂಡು ಹೋಗಲು ಸಾಧ್ಯವಾಗುವಂತೆ ನಾನು ತಿಳಿದು ಆಚರಿಸುತ್ತ ಬಂದಿರುವುದನ್ನು ಹಾಗೂ ಬಲ್ಲವರಿಂದ ತಿಳಿದುಕೊಂಡದ್ದನ್ನು ಈ ಚಿಕ್ಕ ಪುಸ್ತಕದಲ್ಲಿ ನಿರೂಪಿಸಿದ್ದೇನೆ. ನನಗಿಂತಲೂ ಅನೇಕ ವಿಷಯಗಳನ್ನು ತಿಳಿದುಕೊಂಡವರು ಅಲ್ಲಲ್ಲಿ ಅನೇಕ ಪಂಡಿತರುಗಳು ಮುಖ್ಯವಾಗಿ ಪೂಜ್ಯ

ಮಠಾಧಿಪತಿಗಳೂ, ಈ ವಿಷಯದಲ್ಲಿ ಹೆಚ್ಚು ಮಾರ್ಗದರ್ಶನ ಮಾಡಲು ಶಕ್ತರಾಗಿದ್ದಾರೆ. ಸುಮಂಗಲಿಯರು ನನ್ನ ಈ ನಮ್ರ ಸೂಚನೆಯನ್ನು ಲಕ್ಷ್ಯದಲ್ಲಿರಿಸಿ ನನ್ನ ಈ ಪುಸ್ತಕದ ಉಪಯೋಗ ಪಡೆಯಬೇಕಾಗಿ ಪ್ರಾರ್ಥನೆ.

### ಧರ್ಮಾಚರಣೆಯಲ್ಲಿ ಮಡಿ-ಮೈಲಿಗೆ ಬಗ್ಗೆ ವಿಚಾರ :

ಸ್ತ್ರೀಯರಿಗೆ ನಿತ್ಯ ಗೌರಿ-ಗಂಗೆ ತುಲಸೀ ಪೂಜೆ ಮಾಡಲು ಮಡಿ ಬಟ್ಟೆ ಬೇಕು. ಅದಕ್ಕಾಗಿ ಮಡಿನೀರಿನ ವ್ಯವಸ್ಥೆ ಆಗಬೇಕು. ನಿತ್ಯ ದೇವರ ಪೂಜೆ-ವೈಶ್ವದೇವ ನಡೆಯುವ ಮನೆಗಳಲ್ಲಿಯಂತೂ ಮಡಿಯಿಂದ ಅಡಿಗೆ ಮಾಡಲೇಬೇಕಾಗುವದು. ಮುಂಬೈ, ಬೆಂಗಳೂರುಗಳಂಥ ನಗರಗಳಲ್ಲಿ ಸಾಮಾನ್ಯವಾಗಿ ಒಂದು ಅಥವಾ ಎರಡು ರೂಮ್‌ಗಳುಳ್ಳ ಮನೆಗಳಲ್ಲಿಯೇ ಇವೆಲ್ಲ ನಡೆಯಬೇಕು. ಈಗಂತೂ ಎರಡು ದಿನಕ್ಕೊಮ್ಮೆ ದಿನದ ಯಾವದೋ ಸಮಯದಲ್ಲಿ ಒಂದು ತಾಸು ನೀರು ಬಂದು ಹೋಗುತ್ತದೆ. ಗಂಡ-ಹೆಂಡತಿಯರಿಬ್ಬರೂ ಹೊಟ್ಟೆಪಾಡಿಗಾಗಿ ನೌಕರಿ ಮಾಡಬೇಕಾಗುತ್ತದೆ. ಬೆಳಿಗ್ಗೆ ಎದ್ದು ಹೋದರೆ ರಾತ್ರಿ ವೇಳೆಗೆ ಮನೆಗೆ ಬಂದು ಸೇರಬೇಕಾಗುತ್ತದೆ. ನೀರು ಕಾಸಲು ಇದ್ದಿಲು ಒಲೆ ಮಾಡಿಕೊಂಡರೆ ಇದ್ದಿಲು ಸಿಗುವದು ಕಷ್ಟ. ಎಲ್ಲವೂ ಗ್ಯಾಸ್‌ನ ಸಹಾಯದಿಂದಲೇ ಆಗಬೇಕು. ಇಂಥ ವಾತಾವರಣದಲ್ಲಿ, ಶುದ್ಧ ಮಾಡಿಕೊಂಡು ಮಡಿಯಿಂದ ಅಡಿಗೆ ದೇವರಪೂಜೆ ಮಾಡಿಕೊಂಡು ಹೋಗುವದು ಸಾಹಸದ ಕೆಲಸವೇ ಆಗಿದೆ. ಶ್ರದ್ಧೆ ಉಳ್ಳವರು ವಂಚನೆ ಇಲ್ಲದೆ ಸಾಧ್ಯವಿದ್ದಷ್ಟು ಶುದ್ಧಮಡಿಯಿಂದ ಈ ಎಲ್ಲ ಧರ್ಮ ಕಾರ್ಯಗಳನ್ನು ನೆರವೇರಿಸಿಕೊಂಡು ಹೋಗಲೇಬೇಕು. ಮುಂಬೈಯಂಥ ಮಹಾನಗರದಲ್ಲಿ ಮಡಿವಂತಿಕೆಯಿಂದ ಧರ್ಮಕಾರ್ಯಗಳನ್ನು ಮಾಡುವವರು ಅನೇಕ ಕುಟುಂಬಗಳಿವೆ. ಅವರನ್ನು ಸಂಪರ್ಕಿಸಿ, ಇದಕ್ಕೆ ಪರಿಹಾರ ಕಂಡುಹಿಡಿದು ಧರ್ಮಕಾರ್ಯಗಳನ್ನು ತಪ್ಪದೇ ಮಾಡಿಕೊಂಡು ಹೋಗಬಹುದಾಗಿದೆ. ಹೇಗೆ ಸಮಯಸಾಧಿಸಿ T.V. ನೋಡುವದನ್ನು ರೂಢಿ ಮಾಡಿಕೊಂಡಿದ್ದೇವೆಯೋ ಹಾಗೆಯೇ ಧರ್ಮಕಾರ್ಯದಲ್ಲಿ ಸ್ವಲ್ಪ ಶ್ರಮವಹಿಸಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಿಕೊಂಡು ಹೋಗುವದು ಅನಿವಾರ್ಯವೇ ಆಗಿದೆ. ಹೆಚ್ಚಿಗೆ ಸಮಯ ಸಾಧ್ಯವಾಗದಿದ್ದರೂ ಕನಿಷ್ಟ ದಿನಕ್ಕೆ 1 ಘಂಟೆ ಸಮಯವನ್ನಾದರೂ ಧರ್ಮಕಾರ್ಯಗಳಿಗೆ ಮೀಸಲಿಡುವದನ್ನು ನಾವು ರೂಢಿಯಲ್ಲಿ ತರಬೇಕು. ಮುಖ್ಯವಾಗಿ ಗೃಹಿಣಿಯಾದವಳು ಪತಿಯು ಧರ್ಮಕಾರ್ಯ ಮಾಡಲು ಸಹಕರಿಸಬೇಕಾಗುವದು. ಅಂದರೆ ಪತಿಯು ನಿತ್ಯಪೂಜೆ, ದೇವರ ನೈವೇದ್ಯ ಮಾಡಲು ಅನುಕೂಲ ಮಾಡಿಕೊಡುವದು, ಮಡಿಬಟ್ಟೆ ಒದಗಿಸುವದು, ಸ್ವತಃ ತಾನು ಮಡಿಯಾಗಿ ತುಳಸಿಪೂಜೆ, ಗೌರಿ, ಗಂಗೆ ಪೂಜೆ ಮಾಡುವದು ಅವಶ್ಯವಾಗಿದೆ. ಪರಮಾತ್ಮನು ನಮಗೆ ಮಹದುಪಕಾರ ಮಾಡುತ್ತಿರುವದನ್ನು ಕೃತಜ್ಞತೆಯಿಂದ ಅವನನ್ನು ನೆನೆಯದೇ ಇರಲು ಸಾಧ್ಯವೇ ? ದೇವರ ಪೂಜೆ, ದೇವತೆಗಳ ಪೂಜೆ ಅಂದರೆ ಇದೇ ಅಲ್ಲವೇ ? ಹಬ್ಬ-ಹರಿದಿನಗಳನ್ನು

ಪಾಲಿಸುವವೆಂದರೆ ಪರಮಾತ್ಮನ ಪರಿವಾರ ದೇವತೆಗಳು ನಮಗೆ ಮಾಡುವ ಉಪಕಾರದ ಸ್ಮರಣೆಯೇ ಆಗಿವೆ. ದೇವರನ್ನು ಒಲಿಸಿಕೊಳ್ಳಲು ನಮಗೆ ಅವನ ಪರಿವಾರ ದೇವತೆಗಳ ಕೃಪೆ ಆಗಬೇಕು. ಈ ಪರಿವಾರ ದೇವತೆಗಳನ್ನು ಯಾವಾಗ, ಹೇಗೆ, ಪೂಜಿಸಬೇಕೆಂಬುದೇ ಹಬ್ಬ-ಹರಿದಿನಗಳನ್ನು ನಮಗಾಗಿ ಮಹರ್ಷಿಗಳು ಮಾಡಿಕೊಟ್ಟಿದ್ದಾರೆ. ವೇದ-ಪುರಾಣ ಉಪನಿಷತ್‌ಗಳೂ ಇವುಗಳನ್ನೇ ಬೋಧಿಸುತ್ತವೆ. ನೇರವಾಗಿ ಪರಮಾತ್ಮನನ್ನು ಒಲಿಸಿಕೊಳ್ಳುವ ಯೋಗ್ಯತೆಯನ್ನು ನಾವು ಮಾನವರು ಪಡೆದಿಲ್ಲವಾದ್ದರಿಂದ ಗುರುಗಳು, ಗಣಪತಿ, ಗೌರಿ-ಗಂಗೆ ಮನಸ್ಸಿನ ಅಭಿಮಾನಿ ದೇವತೆ ಮಹಾದೇವರು ಮುಖ್ಯವಾಗಿ ಮುಖ್ಯಪ್ರಾಣದೇವರು ಇವರುಗಳನ್ನು ಪೂಜಿಸಿ ಇವರುಗಳ ಮುಖಾಂತರ ದೇವರನ್ನು ಒಲಿಸಿಕೊಳ್ಳಬೇಕಾಗುವದು. ಇವರು ಪ್ರಸನ್ನವಾದಲ್ಲಿ ದೇವರ ಕೃಪೆ ಆಗಿ ನಮಗೆ ನಮ್ಮ ಯೋಗ್ಯತಾನುಸಾರ ಸುಖ-ಶಾಂತಿ ದೊರಕುವದರಲ್ಲಿ ಸಂಶಯವಿಲ್ಲ.

ನಮ್ಮ ನಿತ್ಯ ನೈಮಿತ್ತಿಕ ಕರ್ಮಗಳನ್ನು ನಾವು ವಂಚನೆ ಇಲ್ಲದೆ ಸ್ವಲ್ಪ ಶ್ರಮವಹಿಸಿ ತಪ್ಪದೇ ಮಾಡುತ್ತ ಹೋದಲ್ಲಿ ನಮ್ಮ ಮನಸ್ಸು ಶುದ್ಧವಾಗುತ್ತದೆ. ಶುದ್ಧ ಮನಸ್ಸಿನಿಂದ ಮಾಡುವ ಧರ್ಮ ಕಾರ್ಯಗಳು ಭಗವಂತನಲ್ಲಿ ನಮಗೆ ಭಕ್ತಿ ಹುಟ್ಟಲು ಕಾರಣ. ಈ ಭಕ್ತಿಯಿಂದಲೇ ಪರಮಾತ್ಮನ ಪ್ರೀತಿ ಸಂಪಾದನೆ. ಪರಮಾತ್ಮನು ಒಲಿದರೆ ಕೇಳುವದೇನಿದೆ ? ಜನ್ಮ ಸಾರ್ಥಕವಾಗುತ್ತದೆ.

ಮನೆಯಲ್ಲಿ ಹಿರಿಯರಾದವರು ಹೀಗೆ ಶುದ್ಧಾಚರಣೆ ಮಾಡುವದರಿಂದ ಮಕ್ಕಳು ಅದನ್ನೇ ನಡೆಯಿಸಿಕೊಂಡು ಹೋಗುವದನ್ನು ನಾವು ಸಂಸಾರದಲ್ಲಿ ಕಾಣುತ್ತಿದ್ದೇವೆ. ಭಾವಿ ಸಂತತಿಯು ಧರ್ಮಾಚರಣೆಯುಳ್ಳವರಾಗಿ ಇಡೀ ಕುಟುಂಬವೇ ಧನ್ಯವಾಗುತ್ತದೆ.

ಮುಖ್ಯವಾಗಿ ನಮ್ಮ ಮಧ್ವಮತವು ಪಂಚಭೇದ-ತಾರತಮ್ಯಗಳಿಂದ ಕೂಡಿದ್ದು ಅದರ ಅನುಸಾರವಾಗಿ ಯೋಗ್ಯ ಗುರುಗಳಿಂದ ಉಪದೇಶ ಪಡೆದು ಧರ್ಮಾಚರಣೆ ಮಾಡುತ್ತ ಹೋಗಬೇಕು. ಹಬ್ಬ-ಹುಣ್ಣಿವೆ ವ್ರತಗಳೂ ನಮಗೆ ಧರ್ಮಾಚರಣೆಯಲ್ಲಿ ಮಾರ್ಗದರ್ಶನ ಮಾಡುತ್ತವೆ. ಕಾರಣ ವರ್ಷದ ಹನ್ನೆರಡು ತಿಂಗಳಲ್ಲಿ ಬರುವ ಹಬ್ಬ-ಹುಣ್ಣಿವೆ ಹಾಗೂ ವ್ರತಗಳನ್ನು, ಅವುಗಳನ್ನು ಆಚರಿಸುವ ನಿಯಮಗಳನ್ನೂ ಈಗ ತಿಳಿದುಕೊಳ್ಳೋಣ.

# ಚೈತ್ರಮಾಸ

**ಯುಗಾದಿ :**

ವಸಂತಋತು ಪ್ರಾರಂಭ, ಗಿಡ-ಮರಗಳು ಚಿಗಿತು ಎಲ್ಲ ಕಡೆಗೆ ಹಸಿರು ಬಣ್ಣವೇ ಕಾಣುವದು. ಸುಖವಾದ ಹವೆ, ಕೋಗಿಲೆಯ ಮಧುರ ಗಾಯನದಿಂದ ಎಲ್ಲರ ಮನಸ್ಸು ಉಲ್ಹಸಿತವಾಗಿರುತ್ತದೆ. ಈ ಮಾಸದಲ್ಲಿ ಪ್ರಥಮವಾಗಿ ಚೈತ್ರ ಶು॥ ಪ್ರತಿಪದೆ ಯುಗಾದಿ ಹಬ್ಬ ಆರಂಭವಾಗುತ್ತದೆ. ಈ ದಿನ ಉಷಃಕಾಲದಲ್ಲಿ ಎದ್ದು ಅಭ್ಯಂಗಸ್ನಾನ ಮಾಡಿ (ತಲೆಗೆ ಎಣ್ಣೆ ಹಚ್ಚಿಕೊಂಡು) ಮಾಡಿಕೊಂಡು ದೇವರ ಮುಂದೆ ಹಾಗೂ ತುಲಸೀ ವೃಂದಾವನದ ಮುಂದೆ ದೀಪಹಚ್ಚಿ ಪ್ರಾರ್ಥನೆ ಸಲ್ಲಿಸಿ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಮನೆಯಲ್ಲಿ ಮಾತಾಪಿತೃಗಳಿಗೆ ಹಿರಿಯರಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆಯಬೇಕು. ಮನೆಯನ್ನು ತಳಿರು ತೋರಣಗಳಿಂದ ಶೃಂಗರಿಸಿ ವಿಶೇಷವಾಗಿ ದೇವರ ಪೂಜೆ ಮಾಡಿ (ಪಂಚಾಮೃತ ಅಭಿಷೇಕ) ಯೋಗ್ಯತೆಗನುಸರಿಸಿ ಪಕ್ವಾನ್ನ ಮಾಡಿ ದೇವರಿಗೆ ಸಮರ್ಪಿಸಿ ಬಂಧು ಬಳಗದಿಂದೊಡಗೂಡಿ ಭೋಜನ ಮಾಡಬೇಕು. ಅಡಿಗೆಯಲ್ಲಿ ಈ ದಿನ ಹೋಳಿಗೆ ಮಾಡುವದು ಸಂಪ್ರದಾಯ. ಮುಖ್ಯವಾಗಿ ಬೇವು-ಬೆಲ್ಲ ದೇವರ ನೈವೇದ್ಯಕ್ಕೆ ಇಟ್ಟು ಎಲ್ಲರೂ ಸ್ವೀಕರಿಸಬೇಕು. ಮುಂಬರುವ ವರ್ಷದಲ್ಲಿ ನಮಗೆ ಸುಖ-ದುಃಖ ಬರುವದನ್ನು ಸಂತೋಷದಿಂದ ಅನುಭವಿಸುವ ಯೋಗ್ಯತೆ ಈ ಬೇವು-ಬೆಲ್ಲ ಸೇವಿಸುವದರಿಂದ ಸಾಧ್ಯವಾಗುತ್ತದೆ. ಬೇವು-ಬೆಲ್ಲ ಅಂದರೆ:- ಬೇವಿನ ಹೂ, ಬೇವಿನ ಚಿಗುರು, ಮೆಣಸು, ಉಪ್ಪು, ಇಂಗು, ಜೀರಿಗೆ, ಅಜ್ವಾನ, ಹುಣಸೀಹಣ್ಣು, ಬೆಲ್ಲ ಎಲ್ಲ ಸೇರಿಸಿ ಸಣ್ಣಾಗಿ ಪುಡಿ ಮಾಡಿ ದೇವರ ನೈವೇದ್ಯಕ್ಕೆ ಇಡಬೇಕು. ನಂತರ ಎಲ್ಲರೂ ಪ್ರಸಾದದಂತೆ ಸ್ವೀಕರಿಸಬೇಕು. ಇದನ್ನು ಬಾಯಲ್ಲಿ ಹಾಕಿಕೊಳ್ಳುವಾಗ "ಶತಾಯುರ್ವಜ್ರ ದೇಹಾಯ ಸರ್ವಸಂಪತ್ಕರಾಯಚ ಸರ್ವಾರಿಷ್ಟವಿನಾಶಾಯ ನಿಂಬಕಂದಳ ಭಕ್ಷಣಮ್" ಅಂತಾ ಹೇಳಬೇಕು. ಹೀಗೆ ಮಾಡುವದರಿಂದ ಮೈಯಲ್ಲಿಯ ಕೆಲವು ರೋಗಗಳೂ ನಾಶವಾಗುವವೆಂದು ತಿಳಿಯಬೇಕು. ಅಲ್ಲದೆ ಸಿಹಿ, ಕಹಿ (ಸುಖ-ದುಃಖ)ಗಳು ವರ್ಷವಿಡೀ ಬರುತ್ತವೆ. ಇದನ್ನ ಸಹಿಸಿಕೊಂಡು ಹೋಗುವದೇ ಬೇವು ಬೆಲ್ಲದ ಸಂಕೇತ.

ಸಾಯಂಕಾಲ ಆ ವರ್ಷವಿಡೀ ಆಗು-ಹೋಗುಗಳನ್ನು ತಿಳಿಯಲು ಪಂಚಾಂಗಶ್ರವಣ ಮಾಡಬೇಕು. ಮುಖ್ಯವಾಗಿ ಮಳೆಬೆಳೆ ಗ್ರಹಣಗಳ ವಿಚಾರವೂ ತಿಳಿಯುವದು. ಮಹಾರಾಷ್ಟ್ರ ಪ್ರದೇಶದಲ್ಲಿ ಈ ಹಬ್ಬಕ್ಕೆ "ಗುಡಿಪಾಡವ್" ಎಂದು ಕರೆಯುತ್ತಾರೆ. (ಇದಕ್ಕೆ ಇಂದ್ರಧ್ವಜಾರೋಹಣವೆಂತಲೂ ಹೆಸರು). ಸಾಮಾನ್ಯವಾಗಿ ಮನುಷ್ಯನ ಎತ್ತರದ ಒಂದು ಕೋಲು ತೆಗೆದುಕೊಂಡು ತುದಿಯಲ್ಲಿ ತಂಬಿಗೆ, ಒಂದು ಖಣ, ಹೂ, ಮಾವಿನ ಹಾಗೂ

[illegible] ಹೂ, ಬೇವಿನ ಸೊಪ್ಪು ಹೊಡಿಸಿ ಮನೆಯ ಮುಂದಿನ ಭಾಗದಲ್ಲಿ ಎಲ್ಲರಿಗೂ ಕಾಣುವಂತೆ ಇಟ್ಟು ಪೂಜೆ ಮಾಡುತ್ತಾರೆ. ಅಲ್ಲದೇ ದೇವಸ್ಥಾನದಲ್ಲಿ ದೇವರಿಗೆ ವಿಶೇಷ ಅಲಂಕಾರ, ಬ್ರಹ್ಮೋತ್ಸವವನ್ನು ನಡೆಸುತ್ತಾರೆ. ಸಾಯಂಕಾಲ ದೇವರ ಭಜನೆ ಹಾಗೂ ಸಾಂಸ್ಕೃತ ಕಾರ್ಯಕ್ರಮಗಳನ್ನು ಏರ್ಪಡಿಸುವುದರೊಂದಿಗೆ ಇಡೀ ದಿನವನ್ನು ಸಂತೋಷದಿಂದ ಕಳೆಯುತ್ತಾರೆ. ಯುಗಾದಿ ಪ್ರತಿಪದೆಯಿಂದ ೧ ತಿಂಗಳು ನಿತ್ಯ ದೇವರ ಪೂಜೆ ಮಾಡುವವರ ಮನೆಗೆ ಪಾಡ್ಯದಿಂದ ೧ ಕೊಡ ನೀರು ಹಾಗೂ ದೇವರ ನೈವೇದ್ಯಕ್ಕೆಂದು ಸಕ್ಕರೆ ಕೊಟ್ಟು ಬರಬೇಕು. ತಿಂಗಳಾದ ನಂತರ ಆ ಬ್ರಾಹ್ಮಣರನ್ನು ಕರೆದು ಊಟಕ್ಕೆ ಹಾಕಿ ತಾಮ್ರದ ಕೊಡ ಹಾಗೂ ಒಂದು ಬೆಳ್ಳಿ ಬಟ್ಟಲು ದಾನ ಮಾಡಬೇಕು. (ಉದಕ ಕುಂಭದಾನ)

ಸಂಪ್ರದಾಯದಲ್ಲಿ ಸ್ವಲ್ಪ ಬದಲಾವಣೆ ಕಂಡರೂ ಇಡೀ ದೇಶದಲ್ಲಿಯ ಎಲ್ಲ ಜನಾಂಗದವರು ಯುಗಾದಿ ಹಬ್ಬವನ್ನು ಸಂತೋಷದಿಂದ ಆಚರಿಸುತ್ತಾರೆ.

**ಗೌರಿತದಿಗೆ :**

ಗೌರೀ ಪೂಜೆಯನ್ನು ಸಮಸ್ತ ಸುಮಂಗಲೆಯರು ಅವಶ್ಯ ಮಾಡಲೇಬೇಕು. ಗೌರಿ ಅಥವಾ ಪಾರ್ವತಿ ಪೂಜೆಯಿಂದ ಲಕ್ಷ್ಮೀ ನಾರಾಯಣರು ಪ್ರೀತರಾಗುತ್ತಾರೆ. ಚೈತ್ರ ಶು|| ತದಿಗೆ ದಿವಸ ಮನೆ-ಮನೆಯಲ್ಲಿ ಸುಮಂಗಲೆಯರು ಗೌರಿ ಕೂಡಿಸುತ್ತಾರೆ. ಕಟ್ಟಿಗೆಯ ತೊಟ್ಟಿಲಲ್ಲಿ ಗೌರಿ ಮೂರ್ತಿಯನ್ನಿಟ್ಟು, ಒಂದು ಮಾಡದಲ್ಲಿ ಇಟ್ಟು ಶೃಂಗರಿಸಿ ಆರತಿ ಮಾಡಬೇಕು. ಜೊತೆಗೆ ಗಂಗೆ (ಭಾಗಿರಥಿಗಿಂಡಿ) ಯನ್ನು ಇಟ್ಟು ಪೂಜಿಸಬೇಕು. ಅಲ್ಲದೆ ಒಂದು ಸಣ್ಣ ಮಣ್ಣಿನ ಅಥವಾ ಹಿತ್ತಾಳೆ ಪಾತ್ರೆಯಲ್ಲಿ ನೆನೆಸಿದ ಮಣ್ಣು ನೀರು ಹಾಕಿ ಭತ್ತವನ್ನು ಹಾಕಬೇಕು. 2 ವಾರಗಳಲ್ಲಿ ಅವು ಚೆನ್ನಾಗಿ ಬೆಳೆದು ಹಸುರಾಗಿ ನೋಡುವವರಿಗೆ ಆನಂದ ಉಂಟುಮಾಡುತ್ತವೆ. ಕೆಲವರು ಭತ್ತದ ಬದಲು ಅಕ್ಕದಿಕಾಳು (ಗೋದಿ ಮುಂ.) ಹಾಕುತ್ತಾರೆ. ಹೀಗೆ ಹುಲುಸಾಗಿ ಬೆಳೆದಷ್ಟು ಆ ವರ್ಷದಲ್ಲಿ ಮಳೆ ಬೆಳೆ ಚೆನ್ನಾಗಿ ಬರುವದೆಂದು ಜನರ ಗ್ರಹಿಕೆಯಾಗಿದೆ. ಈ ಪ್ರಸಂಗದಲ್ಲಿ ಮನೆಗೆ ಮುತ್ತೈದೆಯರನ್ನೂ ಕರೆದು ಗೌರಿಗೆ ಆರತಿ ಮಾಡಿ ಬೇಸಿಗೆ ಕಾಲವಾದ್ದರಿಂದ ಮಾವಿನಕಾಯಿ, ಹಸಿಕೊಬ್ಬರಿ, ಹೆಸರು ಬೇಳೆ, ಕಡ್ಲೆಬೇಳೆ, ಕೋಸಂಬರಿ, ಪಾನಕವನ್ನೂ ಕೊಡುತ್ತಾರೆ. ಇದರಿಂದ ದೇಹಕ್ಕೆ ಹಿತಕರವಾಗಿರುತ್ತದೆ. ಹೊಸತಾಗಿ ಮದುವೆ ಆದ ಹೆಣ್ಣುಮಕ್ಕಳು ಈ ಗೌರಿ ಪೂಜೆಯನ್ನು ಐದು ವರ್ಷದವರೆಗೆ ತಪ್ಪದೇ ಒಳ್ಳೆ ಸಂಭ್ರಮದಿಂದ ಆಚರಿಸುತ್ತಾರೆ. ಅಂದರೆ ಮುತ್ತೈದೆಯರನ್ನು ಕರೆದು ಅವರ ಕಾಲು ತೊಳೆದು ಅರಿಷಿಣ, ಕುಂಕುಮ, ಹೂ, ಬಳೆ, ದಕ್ಷಿಣೆ ಕೊಟ್ಟು ಪಾನಕ, ಕೋಸಂಬರಿ ಕೊಡಬೇಕು. ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆಯುತ್ತಾರೆ. ಹೀಗೆ ಮಾಡುವದರಿಂದ ಮುತ್ತೈದೆಯರ ಅಂತರ್ಗತ ಪಾರ್ವತಿ (ಗೌರಿ) ಪರಮೇಶ್ವರರು ಸಂತುಷ್ಟರಾಗಿ ನವ ವಧುಗಳಿಗೆ ದೀರ್ಘ ಸುಮಂಗಲೆಯರಾಗುವಂತೆ ಹರಸುತ್ತಾರೆ.

ಚೈತ್ರ ಮಾಸದಲ್ಲಿ ಬರುವ ಎರಡು ತದಿಗೆ ಹಾಗೂ ವೈಶಾಖ ಶು ತದಿಗೆ (ಅಕ್ಷಯತೃತೀಯಾ) ದಿನಗಳಲ್ಲಿ ಎಲ್ಲ ಸಾಧ್ವಿಗಳು ಗೌರೀಪೂಜೆಯನ್ನು ಮಾಡಬೇಕು.

**ರಾಮನವಮಿ ಹಾಗೂ ಹನುಮಜಯಂತಿ :**

ಭಗವಂತನು ಶ್ರೀರಾಮಚಂದ್ರನಾಗಿ ಅವತರಿಸಿದ್ದು ಚೈತ್ರ ಶು|| ನವಮಿ. ಆದರೆ ಆಂಜನೇಯನು ವಾಯುದೇವರು ಅವತರಿಸಿದ್ದು ಚೈತ್ರ ಶು|| ಹುಣ್ಣಿಮೆ ದಿನ. ಈ ಹಬ್ಬಗಳನ್ನು ಇಡೀ ದೇಶದಲ್ಲಿಯೇ ಭಗವದ್ಭಕ್ತರು ವಿಶೇಷ ರೀತಿಯಿಂದ ಆಚರಿಸುವದನ್ನು ನಾವು ಕಾಣುತ್ತೇವೆ. ಯುಗಾದಿ ಪ್ರತಿಪದೆಯಿಂದ ಉಷಃಕಾಲದಲ್ಲಿ ಎಲ್ಲ ದೇವಸ್ಥಾನಗಳಲ್ಲಿ ಮಂಗಳವಾದ್ಯ, ಬೆಳಿಗ್ಗೆ ದೇವರಿಗೆ ವಿಶೇಷ ಪೂಜೆ, ದೀಪೋತ್ಸವ, ಅಲಂಕಾರ, ರಾಮಭಜನೆ ಕೀರ್ತನೆ, ಮಧ್ಯಾಹ್ನ, ಸಾಯಂಕಾಲ ಉಪನ್ಯಾಸ, ಭಕ್ತಿ ಸಂಗೀತ ನಡೆಯುವದಲ್ಲದೆ ಮನೆ ಮನೆಗಳಲ್ಲಿ ಭಕ್ತರು ವಿಶೇಷ ಪೂಜೆ ಸಲ್ಲಿಸುತ್ತಾರೆ. ಶ್ರೀ ರಾಮಚಂದ್ರನು ಚೈತ್ರ ಶು|| ನವಮಿ ಮಧ್ಯಾಹ್ನ ಸರಿಯಾಗಿ 12 ಘಂಟೆಗೆ ಅವತರಿಸಿದರೆ ಚೈತ್ರ ಹುಣ್ಣಿಮೆ ಸೂರ್ಯೋದಯಕ್ಕೆ ಸರಿಯಾಗಿ ಹನುಮಂತನ ಅವತಾರವಾಗುತ್ತದೆ. ಈ ವೇಳೆಗೆ ಭಕ್ತರೆಲ್ಲರೂ ಸ್ನಾನ ಮಾಡಿ ಮಡಿಯಿಂದ ದೇವರನ್ನು ತೊಟ್ಟಿಲಲ್ಲಿ ಹಾಕಿ ಆರತಿ ಮಾಡಿ ವಿವಿಧ ವಾದ್ಯ ವೈಭವಗಳೊಂದಿಗೆ ತಮಗಾದ ಆನಂದವನ್ನು ಪ್ರದರ್ಶಿಸುತ್ತಾರೆ. ಶ್ರೀಮಂತರು ಬಡಜನರಿಗೆ ವಿಶೇಷ ಅನ್ನದಾನ ಮಾಡುತ್ತಾರೆ.

ಶ್ರೀರಾಮಚಂದ್ರನು ಪರಮಾತ್ಮನೇ ಆದರೂ ಸಾಮಾನ್ಯ ವೀರ ಪುರುಷನಂತೆ ವರ್ತಿಸಿ ಜೀವನದಲ್ಲಿ ಬರುವ ಕಷ್ಟ ಸುಖವನ್ನು ಎದುರಿಸುವ ರೀತಿ ನೀತಿಗಳನ್ನು ಸಮಾಜಕ್ಕೆ ತೋರಿಸುತ್ತಾನೆ. ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ (ಭಕ್ತರಿಗೆ) ಎಲ್ಲ ರೀತಿಯಿಂದ ಪರಿಪಾಲನೆ ಮಾಡುವದನ್ನು ನಾವು ಗಮನಿಸಬಹುದು. ತ್ರೇತಾಯುಗದಲ್ಲಿ ಶ್ರೀರಾಮನ ಅವತಾರವಾದರೂ ಈ ಕಲಿಯುಗದಲ್ಲಿ ಅವನ ಆದರ್ಶಗಳನ್ನು ಪ್ರತಿ ಮಾನವನು ಅನುಸರಿಸಲು ಪ್ರಯತ್ನ ಮಾಡುತ್ತಾನೆ. ಜಗತ್ತಿನಾದ್ಯಂತ ಶ್ರೀ ರಾಮಚಂದ್ರನು ಆದರ್ಶ ಪುರುಷನಾಗಿದ್ದಾನೆ. ರಾಮನವಮಿಯು ಸಾರ್ವಜನಿಕವಾಗಿಯೂ ಎಲ್ಲ ಕಡೆಯಲ್ಲಿ ಆಚರಿಸಲ್ಪಡುತ್ತದೆ. ಬೆಂಗಳೂರಿನಲ್ಲಿಯಂತೂ ರಾಮೋತ್ಸವವು ತಿಂಗಳು ತಿಂಗಳು ಒಳ್ಳೇ ವಿಜೃಂಭಣೆಯಿಂದ ನಡೆಯುವದನ್ನು ನಾವು ಕಾಣುತ್ತೇವೆ. ಅದರಂತೆ ರಾಮದೂತನಾದ ಹನುಮಂತ ದೇವರ ಉತ್ಸವವು ದೇಶಾದ್ಯಂತ ನಡೆಯುತ್ತದೆ. ಭಾರತದಲ್ಲಿ ಪ್ರತಿ ಹಳ್ಳಿಯಲ್ಲಿ ಹನುಮಂತ ದೇವರ ಗುಡಿಯನ್ನು ನಾವು ಕಾಣುತ್ತೇವೆ. ಜಾತಿ ಪಂಥ ಭೇದವಿಲ್ಲದೇ ಎಲ್ಲರೂ (ಹಿಂದುಗಳು) ಹನುಮಂತ ದೇವರನ್ನು ಸೂರ್ಯೋದಯಕ್ಕೆ ಸರಿಯಾಗಿ ತೊಟ್ಟಿಲಲ್ಲಿ ಹಾಕಿ ಆರಾಧಿಸುವದು ಒಂದು ಮಹತ್ವದ ಸಂಗತಿಯಾಗಿದೆ.

ಚೈತ್ರ ಮಾಸದಲ್ಲಿ ಯುಗಾದಿ ಪ್ರತಿಪದೆಯಿಂದ ಹುಣ್ಣಿಮೆವರೆಗೆ ಈ ಹಬ್ಬಗಳು ಮುಖ್ಯವಾಗಿವೆ.

# ವೈಶಾಖಮಾಸ

**ಶ್ರೀ ವೆಂಕಟೇಶ ಕಲ್ಯಾಣ :**

ವೈಶಾಖ ಶು|| ದಶಮಿ ದಿವಸ ಶ್ರೀ ವೆಂಕಟೇಶ-ಪದ್ಮಾವತಿ ಕಲ್ಯಾಣ ಮಹೋತ್ಸವ ತಿರುಪತಿ ಕ್ಷೇತ್ರದಲ್ಲಿ ಸಂಭ್ರಮದಿಂದ ಈ ಉತ್ಸವ ನಡೆಯುತ್ತದೆ. ಜಗತ್ತಿನ ಅನೇಕ ಭಾಗದಿಂದ ಈ ಉತ್ಸವವನ್ನು ನೋಡಲು ಬರುತ್ತಾರೆ. ಪ್ರತಿ ಮನೆಗಳಲ್ಲಿಯೂ ತಮ್ಮ ತಮ್ಮ ಶಕ್ತ್ಯಾನುಸಾರ ಭಕ್ತರು ಉತ್ಸವವನ್ನು ನೆರವೇರಿಸುತ್ತಾರೆ. ಚಂದನದ ವೆಂಕಟೇಶ ಪದ್ಮಾವತಿ ಗೊಂಬೆಗಳನ್ನು (ಇಲ್ಲವೆ ವೆಂಕಟೇಶ ಪದ್ಮಾವತಿ ಫೋಟೋವನ್ನು ಪೂಜಿಸಬೇಕು). ಅಲಂಕರಿಸಿ ಮಂಟಪ ದಲ್ಲಿರಿಸಿ ವೆಂಕಟೇಶ ಕಲ್ಯಾಣ ಹಾಡನ್ನು ಹೇಳಿ ಭಕ್ತರನ್ನು ಸೇರಿಸಿ ಗೊಂಬೆಗಳಿಗೆ ಆರತಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಸತ್ಪಾತ್ರದಲ್ಲಿ ವಸ್ತ್ರದಾನ, ಭಾರಿ ಭೋಜನ ನಡೆಯುತ್ತದೆ. ವೆಂಕಟೇಶ ಮಹಾತ್ಮೆ ಪುರಾಣವನ್ನು ಹೇಳುವದು, ಕೇಳುವದು, ಮಂಗಲಕರವಾಗಿದೆ.

**ನರಸಿಂಹ ಜಯಂತಿ :**

ವೈಶಾಖ ಶು|| ತ್ರಯೋದಶಿ ದಿವಸ ಪರಮಾತ್ಮನು ನರಸಿಂಹ ರೂಪದಿಂದ ಕಂಬದಿಂದ ಅವತರಿಸುತ್ತಾನೆ. ಭಕ್ತ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ದುಷ್ಟ "ಹಿರಣ್ಯಕಶ್ಯಪ"ನನ್ನು ಸಂಹರಿಸಿ ಭಗವದ್ಭಕ್ತರಿಗೆ ಆನಂದವನ್ನು ಕೊಡುವದೇ ಈ ಅವತಾರದ ಉದ್ದೇಶ. ಹಿರಣ್ಯಕಶ್ಯಪನು ತಪಸ್ಸು ಮಾಡಿ ಬ್ರಹ್ಮನು ಸೃಷ್ಟಿಸಿದ ಯಾವುದೇ ಪದಾರ್ಥದಿಂದ ತನ್ನ ಸಾವು ಆಗಬಾರದೆಂದೂ, ಹಗಲು ರಾತ್ರಿ ಆಗಬಾರದೆಂದೂ ಮುಂತಾದ ಅನೇಕ ವರಗಳನ್ನು ಪಡೆದುಕೊಳ್ಳುತ್ತಾನೆ. ಪರಮಾತ್ಮನು ಇವನ ಯಾವತ್ತೂ ಕರಾರುಗಳನ್ನು ಮನ್ನಿಸಿ ಸಾಯಂಕಾಲ ಸಮಯದಲ್ಲಿ ಕಂಬದಿಂದ ನಾರಸಿಂಹ ಅವತಾರವನ್ನು ಹೊಂದಿ ಯಾವುದೇ ಆಯುಧದ ಸಹಾಯವಿಲ್ಲದೆ ತನ್ನ ಉಗುರುಗಳಿಂದ ತನ್ನ ತೊಡೆಯ ಮೇಲೆ ಕಶ್ಯಪನನ್ನು ಮಲಗಿಸಿಕೊಂಡು ಹೊಟ್ಟೆ ಬಗೆದು ಆತನ ಪ್ರಾಣವನ್ನು ತೆಗೆಯುತ್ತಾನೆ. ವರವನ್ನು ದಯಪಾಲಿಸಿದ ಬ್ರಹ್ಮನೂ ಪರಮಾತ್ಮನ ಈ ಕೌಶಲ್ಯವನ್ನು ಕಂಡು ಬೆರಗಾಗುತ್ತಾನೆ. ದುಷ್ಟ ಹಿರಣ್ಯ ಕಶ್ಯಪ ನನ್ನು ಸಂಹರಿಸಿದ ಈ ಸಾಯಂಕಾಲದಲ್ಲಿ ಭಗವದ್ಭಕ್ತರೆಲ್ಲ ಶ್ರೀ ನರಸಿಂಹ ದೇವರನ್ನು ಅನನ್ಯ ಭಕ್ತಿಯಿಂದ ಪೂಜೆ ಮಾಡಿ ಸಾಯಂಕಾಲ ಸಮಯವಾದ್ದರಿಂದ ಕೇವಲ ನಾನಾಫಲಹಾರವನ್ನು ತಯಾರಿಸಿ ನರಸಿಂಹದೇವರಿಗೆ ಸಮರ್ಪಿಸಿ ಬ್ರಾಹ್ಮಣಸುವಾಸಿನಿಯರಿಗೆ ಕೊಟ್ಟು ತಾವೂ ಸ್ವೀಕರಿಸುತ್ತಾರೆ. ಕೆಲವರು ಮನೆಯಲ್ಲಿ ಅಂದೆ ಹಬ್ಬದ ಅಡಿಗೆ ಮಾಡಿ ಬ್ರಾಹ್ಮಣರನ್ನು ಕರೆದು ಊಟ ಮಾಡುತ್ತಾರೆ. ಮರುದಿವಸ ಶ್ರೀ ನರಸಿಂಹದೇವರಿಗೆ ವಿಶೇಷ ಪೂಜೆ, ವಿವಿಧ

ಪಕ್ವಾನ್ನ ಮಾಡಿ, ನೈವೇದ್ಯ ಮಾಡಿ, ಭಕ್ತರೆಲ್ಲ ಪಾರಣೆ ಮಾಡುತ್ತಾರೆ. ಈ ದಿನ ಅಡಿಗೆಯಲ್ಲಿ ಹೋಳಿಗೆ ಮಾಡುವದು ವಿಶೇಷವಾಗಿದೆ. ಅದರ ಮರುದಿನ ಹುಣ್ಣಿಮೆ. ಆ ದಿವಸ ವ್ಯಾಸ ಪೂಜೆ. ವೈಶಾಖ ಸ್ನಾನ ಸಮಾಪ್ತಿ ಕಾರ್ಯಕ್ರಮ ಇರುತ್ತದೆ. ಅದೇ ದಿವಸ (ವೈಶಾಖ ಹುಣ್ಣಿಮೆ). ಸೂರ್ಪಾಲಿ ಕ್ಷೇತ್ರ, ತೊರವಿ ಕ್ಷೇತ್ರ, ಮುಗಟಗಾನ ಹುಬ್ಬಳ್ಳಿಯ ನರಸಿಂಹ ಕ್ಷೇತ್ರ, ನೀರಾ ನಾರಸಿಂಹ ಕ್ಷೇತ್ರ, ದೇವರಾಯನ ದುರ್ಗ ಮುಂತಾದ ಕಡೆಯಲ್ಲಿ ರಥೋತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ವೈಶಾಖ ಮಾಸ ಬಿಸಿಲಿನ ತಾಪ ವಿಶೇಷವಾದ್ದರಿಂದ ಬ್ರಾಹ್ಮಣ ಸುವಾಸಿನಿಯರಿಗೆ ಆಮಂತ್ರಣ ಕೊಟ್ಟು ಅವರಿಗೆ ಪಾದ ಪ್ರಕ್ಷಾಲನ, ಗಂಧಲೇಪನ, ಮಾಲಾರ್ಪಣೆ ಮಾಡಿ ತಂಪಾದ ಪದಾರ್ಥಗಳನ್ನು, ಪಾನಕ,ಕೋಸಂಬರಿಗಳನ್ನು ಉಣಬಡಿಸಿ ಕೃತಾರ್ಥರಾಗುತ್ತಾರೆ. ಪರಮಾತ್ಮನು ಒಂದು ರೂಪದಿಂದ ಭೂ ಸುರರಲ್ಲಿ (ಬ್ರಾಹ್ಮಣರಲ್ಲಿ) ಇರುವದರಿಂದ ಅಂಥ ಸತ್ಪಾತ್ರದಲ್ಲಿ ದಾನ ಮಾಡುವದರಿಂದ ಶ್ರೀ ನರಸಿಂಹರೂಪಿ ಪರಮಾತ್ಮನು ಕೃಪೆ ಮಾಡುವದರಲ್ಲಿ ಸಂದೇಹವಿಲ್ಲ. ಅನೇಕ ಮನೆತನಗಳಲ್ಲಿ ಶ್ರೀ ನರಸಿಂಹ ದೇವರೇ ಕುಲದೇವತೆಯಾಗಿದ್ದು ಅವರುಗಳು ಆಚರಿಸುವ ನರಸಿಂಹ ಜಯಂತಿಯನ್ನು ನೋಡಿ ನಾವುಗಳು ಕೃತಾರ್ಥರಾಗಬೇಕು. ನಾವೂ ಶ್ರೀ ನರಸಿಂಹ ದೇವರನ್ನು ನಮ್ಮ ಯೋಗ್ಯತೆಗನುಸರಿಸಿ ಆರಾಧಿಸಬೇಕು.

**ವೈಶಾಖ ಸ್ನಾನ :**

ಚೈತ್ರ ಶು॥ ಹುಣ್ಣಿಮೆ (ದವನದ ಹುಣ್ಣಿಮೆ) ಯಿಂದ ಪ್ರಾರಂಭಿಸಿ ವೈಶಾಖ ಶು॥ ಹುಣ್ಣಿಮೆ (ಅಗಿ ಹುಣ್ಣಿಮೆ) ಪರ್ಯಂತ ನಿತ್ಯ ಅರುಣೋದಯದಲ್ಲಿ ಸಮುದ್ರಸ್ನಾನವಾಗಲಿ, ನದಿಸ್ನಾನವಾಗಲಿ ಅಥವಾ ಬಾವಿಸ್ನಾನವಾಗಲಿ ಮಾಡುವದು ಪರಮ ಶ್ರೇಯಸ್ಕರ. ಇದು ಸಾಧ್ಯವಾಗದೇ ಹೋದಲ್ಲಿ ಮನೆಯಲ್ಲಿಯೇ ಬಿಸಿನೀರಿನ ಸ್ನಾನ ಮಾಡಬಹುದು. (ಬಿಸಿನೀರನ್ನು ಮಾಡುವದಾದಲ್ಲಿ ಮೊದಲು ಗಂಗಾಳದಲ್ಲಿ ಸ್ವಲ್ಪ ತಣ್ಣೀರು ಹಾಕಿ ನಂತರ ಬಿಸಿ ನೀರು ಹಾಕಬೇಕು. ನಂತರ ಮತ್ತೆ ಸ್ವಲ್ಪ ತಣ್ಣೀರು ಹಾಕಬೇಕು. ಹೀಗೆ ಮಾಡುವದರಿಂದ ಬಿಸಿನೀರು ಸ್ನಾನ ಮಾಡಿದ ದೋಷ ಪರಿಹಾರವಾಗುವದೆಂದು ಗ್ರಹಿಕೆ). ಹೀಗೆ ವೈಶಾಖ ಸ್ನಾನದ ಮಹಿಮೆ ವಿಶೇಷವಾಗಿದೆ.

# ಜ್ಯೇಷ್ಠಮಾಸ

**ದಶಹರಾ :**

ಈ ತಿಂಗಳು ಶು|| ಪ್ರತಿಪದೆಯಿಂದ ದಶಮಿವರೆಗೆ "ದಶಹರಾ" ವ್ರತ, ದಶಮಿ ದಿವಸ ವಿಶೇಷವಾಗಿ ಗಂಗಾ ಪೂಜೆ ಮಾಡಬೇಕು. ಭಾಗೀರಥೀ (ಗಂಗಾ) ಜಯಂತಿಯೂ ಆಗಿದೆ. ಒಂದಕ್ಕೆ ಭಗೀರಥ ಮಹಾರಾಜನ ಪೂರ್ವಜರು ಕಪಿಲ ಮಹರ್ಷಿಯಿಂದ ಶಾಪಗ್ರಸ್ಥರಾಗಿ ಸುಟ್ಟು ಬೂದಿ ಆಗಿದ್ದರು. ಅವರನ್ನು ಉದ್ಧರಿಸಲು ಗಂಗೆಯನ್ನು ಭೂಲೋಕಕ್ಕೆ ತಂದು ಬೂದಿಯ ಮೇಲೆ ನೀರು ಹರಿಯುವಂತೆ ಮಾಡಿದರೆ ಮಾತ್ರ ಸಾಧ್ಯವೆಂದು ತಿಳಿದು ಭಗೀರಥ ಮಹಾರಾಜನು ಉಗ್ರ ತಪಸ್ಸು ಮಾಡಿ ಗಂಗೆಯನ್ನು ಪ್ರತ್ಯಕ್ಷೀಕರಿಸಿಕೊಂಡು ತನ್ನ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಅವನ ತಪಸ್ಸಿಗೆ ಸಂತುಷ್ಟಳಾಗಿ 'ಗಂಗೆ'ಯು ಭೂಮಿಗಿಳಿದು ಬಂದು ಬೂದಿಯ ಮೇಲೆ ಹರಿಯುತ್ತಾಳೆ, ಪರಿಣಾಮವಾಗಿ ಸತ್ತವರೆಲ್ಲರೂ ಸದ್ಗತಿಯನ್ನು ಹೊಂದುತ್ತಾರೆ. ಭಗೀರಥನ ಪ್ರಯತ್ನದಿಂದ ಗಂಗೆಯು ಭಾರತದೇಶದಲ್ಲಿ ಹರಿದು ಬಂದದ್ದರಿಂದ 'ಗಂಗೆ' ಗೆ 'ಭಾಗೀರಥಿ' ಅಂತಾ ಹೆಸರು ಬರಲು ಕಾರಣವಾಯಿತು. ಆದ್ದರಿಂದ ಈ ಪವಿತ್ರ ನದಿಯನ್ನು ಈ ದಿನ ವಿಶೇಷ ಪೂಜಿಸುವದಲ್ಲದೇ ಭಗೀರಥನ ಸ್ಮರಣೆಯನ್ನು ಪ್ರತಿಯೊಬ್ಬರೂ ಮಾಡಿಕೊಳ್ಳುವದು ಅವಶ್ಯವಿದೆ. ಹೀಗೆ ಪೂಜಿಸುವದರಿಂದ ನಮ್ಮ ಪಾಪಗಳನ್ನು ಕಳೆದು ಉದ್ಧಾರ ಮಾಡುವದಾಗಿ 'ದಶಹಾರ ವ್ರತ'ವು ಕಾರಣವಾಗಿದೆ. ಭಾರತದೇಶದಲ್ಲಿಯಂತೂ ಪ್ರತಿಯೊಬ್ಬ ನಾಗರಿಕನು ಗಂಗಾಸ್ನಾನ ಮಾಡಿ ಕೃತಕೃತ್ಯರಾಗುವದನ್ನು ನಾವು ಮರೆಯುವಂತಿಲ್ಲ.

**ವಟಸಾವಿತ್ರಿ ವ್ರತ :**

ಜ್ಯೇಷ್ಠ ಶು|| 15 (ಹುಣ್ಣಿಮೆ) ವಟಸಾವಿತ್ರಿ ವ್ರತ. ಸಾವಿತ್ರಿಯ ಪತಿ ಸತ್ಯವಾನನು ಅಲ್ಪಾಯುಷಿಯೆಂದು ತಿಳಿದೂ ಸಾವಿತ್ರಿಯು ಅವನನ್ನು ವರಿಸುತ್ತಾಳೆ. ಆದರ್ಶ ಪತಿವ್ರತೆಯಾಗಿ ಗಂಡನ ಹಾಗೂ ಅತ್ತೆ ಮಾವಂದಿರ ಸೇವೆಯನ್ನು ಅತ್ಯಂತ ಭಕ್ತಿ ಶ್ರದ್ಧೆಯಿಂದ ಮಾಡುತ್ತಾ ತನ್ನ ಪತಿ ದೀರ್ಘಾಯುಷ್ಯವುಳ್ಳವನಾಗಬೇಕೆಂದು ಹಗಲಿರುಳೂ ಪರಮಾತ್ಮನ ಧ್ಯಾನದಲ್ಲಿಯೇ ಸಮಯವನ್ನು ಕಳೆಯುತ್ತಾಳೆ. ಆದರೆ ಬ್ರಹ್ಮಲಿಪಿಯಂತೆ ಪತಿಯು ಅಕಾಲಿಕ ಮರಣಕ್ಕೆ ತುತ್ತಾಗುತ್ತಾನೆ. ತನ್ನ ಗಂಡನ ಪ್ರಾಣವನ್ನು ಒಯ್ಯಲು ಬಂದ ಯಮನ ಭಟರನ್ನು ಅವಳು ತಡೆಯುತ್ತಾಳೆ. ಹೀಗಾಗಿ ಸ್ವತಃಯಮದೇವರು ಬಂದು ಪ್ರಾಣ ಹರಣ ಮಾಡಲು ಉದ್ಯುಕ್ತನಾದಾಗ ಸಾವಿತ್ರಿಯು ಯಮದೇವರನ್ನು ಅನನ್ಯ ಭಾವದಿಂದ ಬೇಡಿಕೊಳ್ಳುತ್ತಾಳೆ. ಯಮನು ಆಕೆಯ ಅಪ್ರತಿಮ ಪಾತಿವ್ರತ್ಯವನ್ನು ಮೆಚ್ಚಿಕೊಂಡು

ಸಾವಿತ್ರಿಗೆ ಪತಿ ಭಕ್ತಿಯನ್ನು ದಯಪಾಲಿಸುವದಲ್ಲದೆ ಪತಿಗೆ ದೀರ್ಘಾಯುಷ್ಯವನ್ನು, ಕಳೆದು ಹೋದ ಸಂಪತ್ತನ್ನು, ಅತ್ತೆ-ಮಾವಂದಿರಿಗೆ ಕಳೆದು ಹೋದ ಕಣ್ಣು ದೃಷ್ಟಿಯನ್ನು ದಯಪಾಲಿಸಿ ಅದೃಶ್ಯನಾಗುತ್ತಾನೆ. ಅಲ್ಲದೆ ಅವಳ ತಂದೆಗೆ ಗಂಡು ಸಂತಾನ ಕೊಡುತ್ತಾನೆ. ಜೊತೆಗೆ ಸಾವಿತ್ರಿಯ ಹೆಸರು ಪುರಾಣದಲ್ಲಿ ಸತಿಸಾವಿತ್ರಿಯೆಂದು ಪ್ರಸಿದ್ಧವಾಗುವಂತೆ ವರವನ್ನು ಕೊಡುತ್ತಾನೆ. ಈ ವಟಸಾವಿತ್ರಿ ಪೂಜೆಯನ್ನು ಆಲದ ಮರದ ಆಶ್ರಯದಲ್ಲಿ ಮಾಡುವ ಸಂಪ್ರದಾಯವಿದೆ. ಇದಕ್ಕೆ ಕಾರಣ ವಟಸಾವಿತ್ರಿಯು ಗಂಡನ ಪ್ರಾಣ ಹೋದದ್ದು, ಸಾವಿತ್ರಿಯು ಅಲ್ಲಿಯೇ ಯಮದೇವರನ್ನು ಪ್ರತ್ಯಕ್ಷೀಕರಿಸಿಕೊಂಡದ್ದು, ಪತಿಯ ಪ್ರಾಣವನ್ನು ಪುನಃ ಸಂಪಾದಿಸಿದ್ದು, ಯಮದೇವರಿಂದ ವರವನ್ನು ಪಡೆದದ್ದು, ಮುಖ್ಯ ವಿಷಯವಾಗಿದೆ. ಸಾಧ್ಯವಾಗದೇ ಇದ್ದಲ್ಲಿ ಈ ವೃಕ್ಷ ಅಂದರೆ, ಆಲದಮರ, ಅದರ ಕೆಳಗೆ ತನ್ನ ಪತಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡದ್ದು, ಯಮದೇವರು ಪ್ರತ್ಯಕ್ಷವಾದದ್ದು, ಪೂಜಾ ಸಲಕರಣೆಗಳು ಮುಂತಾದವುಗಳಿಂದ ಕೂಡಿದ ಚಿತ್ರಪಟವನ್ನು ಮನೆಯಲ್ಲಿಯೇ ಇಟ್ಟುಕೊಂಡು ಈ ಪಟಕ್ಕೇನೆ ಪೂಜೆ ಸಲ್ಲಿಸಿ, ಮಾಂಗಲ್ಯ ಸೌಭಾಗ್ಯವನ್ನು ಕೊಡುವಂತೆ ಸಾಧ್ವೀಮಣಿಗಳು ದೇವರನ್ನು ಪ್ರಾರ್ಥಿಸಿಕೊಳ್ಳುವರುಂಟು. ಅಂತೂ ವಟ ಸಾವಿತ್ರಿ ಪೂಜೆ ಮುತ್ತೈದೆಯರಿಗೆ ಮುಖ್ಯವಾದದ್ದಾಗಿದೆ.

**ಮಣ್ಣೆತ್ತಿನ ಅಮಾವಾಸ್ಯ :**

ಮೃತ್ತಿಕಾ ವೃಷಭ ಪೂಜೆ ಜ್ಯೇಷ್ಠ ಬ|| ಅಮಾವಾಸ್ಯೆ ದಿನದಂದು ಮಣ್ಣಿನಿಂದ ತಯಾರಿಸಿದ ಎತ್ತುಗಳನ್ನು ದೇವರ ಪೂಜೆ ಸಮಯದಲ್ಲಿ ಪೂಜಿಸಬೇಕು. ಭಾರತ ದೇಶವು ಕೃಷಿಪ್ರಧಾನವಾಗಿದ್ದು ಮನುಷ್ಯನ ಆಹಾರ ಸಾಮಗ್ರಿಗಳು ಭೂಮಿಯಲ್ಲಿ ಹುಟ್ಟುವದಾದರೆ ಭೂಮಿಯಲ್ಲಿ ಬೀಜ ಬಿತ್ತಲು, ಬಿತ್ತಿದ ಫಸಲು ಬಂದ ಮೇಲೆ ಧಾನ್ಯ ರೂಪದಿಂದ ನಮಗೆ ದೊರಕಲು, ಮುಖ್ಯವಾಗಿ ವೃಷಭಗಳ ಸೇವೆ ಅಪೇಕ್ಷಿತವಾದದ್ದು. ಪರಮೇಶ್ವರನಿಗೆ ವಾಹನವಾದದ್ದರಿಂದ, ಅವನಿಗೆ ನಂದಿವಾಹನನೆಂದೇ ಹೆಸರು ಬಂದಿದೆ. ಹೀಗಾಗಿ ಎತ್ತುಗಳಿಗೆ ಮಾನವನು ಅತ್ಯಂತ ಕೃತಜ್ಞನಾಗಿದ್ದಾನೆ. ಭೂದೇವಿಯ ಪೂಜೆಯೂ ಇದರಲ್ಲಿ ಅಡಗಿದೆ. ಈ ದಿನ ಅಡಿಗೆಯಲ್ಲಿ ವಿಶೇಷವಾಗಿ ಕುಚ್ಚಿದ ಕಡಬು ಮಾಡಿ ದೇವರಿಗೆ ನಂತರ ತಾರತಮ್ಯವಾಗಿ ವೃಷಭಗಳಿಗೆ ನೈವೇದ್ಯ ಸಲ್ಲಿಸಿ ಭೋಜನ ಮಾಡುವದು ಪದ್ಧತಿಯಾಗಿದೆ.

# ಚಾತುರ್ಮಾಸ

**ಚಾತುರ್ಮಾಸ ಮಹತ್ವ :**

ವರ್ಷದಲ್ಲಿ ಉತ್ತರಾಯಣ ದಕ್ಷಿಣಾಯಣ ಹೀಗೆ ಆರಾರು ತಿಂಗಳು ಇರುತ್ತವೆ ಅಷ್ಟೇ ? ಉತ್ತರಾಯಣ ಕಾಲ ದೇವತೆಗಳಿಗೆ ಹಗಲು ದಕ್ಷಿಣಾಯಣದ ಕಾಲ ದೇವತೆಗಳಿಗೆ ರಾತ್ರಿ ಅಂತಾ ನಿಯಮವಿದೆ. ನಾವು ಯಾವುದೇ ಶುಭ ಕಾರ್ಯವನ್ನು ಹಗಲು ಮಾಡುತ್ತೇವೆ.ಅಂದರೆ ಉತ್ತರಾಯಣದಲ್ಲಿ ಮಾಡುತ್ತೇವೆ. ರಾತ್ರಿ ಕಾಲ ಅಂದರೆ ದಕ್ಷಿಣಾಯಣದಲ್ಲಿ ಯಾವ ಶುಭ ಕಾರ್ಯವನ್ನೂ ಮಾಡುವದಿಲ್ಲ. ಹೀಗಿರುವದರಿಂದ ದಕ್ಷಿಣಾಯಣದ ನಿಯಾಮಕ ದೇವತೆಯು ಸೃಷ್ಟಿಕರ್ತ ಬ್ರಹ್ಮನ ಹತ್ತಿರ ಹೋಗಿ ಮಾನವರು ಯಾವ ಶುಭ ಕಾರ್ಯವನ್ನೂ ನನ್ನ ಕಾಲದಲ್ಲಿ ಮಾಡುವದಿಲ್ಲವಾದ್ದರಿಂದ ಅಂದರೆ ದಕ್ಷಿಣಾಯಣ ಕಾಲವು ಶುಭ ಕಾರ್ಯಗಳಿಗೆ ನಿಷಿದ್ಧವಾದ್ದರಿಂದ ತನಗೆ ಬಹಳ ದುಃಖವಾಗಿದೆಯೆಂದೂ ಅದನ್ನು ಹೇಗೆ ಸರಿಪಡಿಸಬೇಕೆಂಬ ಉಪಾಯವನ್ನು ತೋರಿಸಿ ಕೃಪೆ ಮಾಡಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತಾನೆ. ಬ್ರಹ್ಮನು ಇದನ್ನು ತಿಳಿದು ದಕ್ಷಿಣ ಅಭಿಮಾನಿ ದೇವತೆಯನ್ನು ಪರಮಾತ್ಮನ ಹತ್ತಿರ ಕರೆದೊಯ್ದು ಅದಕ್ಕೆ ಮಾರ್ಗದರ್ಶನ ಮಾಡಿ ಕೃಪೆ ಮಾಡಬೇಕೆಂದು ಪ್ರಾರ್ಥಿಸಲು ಪರಮಾತ್ಮನು ಈ ಚಾತುರ್ಮಾಸದಲ್ಲಿ ವಿಶೇಷ ಹಬ್ಬ ಹಾಗೂ ವ್ರತಗಳನ್ನು ನಿಯಮ ಮಾಡಿ ಅದರಂತೆ ಆಚರಿಸುವ ಎಲ್ಲ ಸುಜೀವಿಗಳಿಗೆ ಉತ್ತರಾಯಣ ಕಾಲದಲ್ಲಿ ಶುಭ ಕಾರ್ಯಗಳನ್ನು ಮಾಡಿ ಹೊಂದುವ ಪುಣ್ಯಕ್ಕಿಂತ ಹೆಚ್ಚಿನ ಪುಣ್ಯ ಬರುವದೆಂದು ನಿಯಮ ಮಾಡಿ ಆ ಮಾಸ ನಿಯಾಮಕ ದೇವತೆಗಳಿಗೆಲ್ಲ ಆಜ್ಞೆ ಮಾಡಿ, ದಕ್ಷಿಣಾಯಣ ನಿಯಾಮಕ ದೇವತೆಯನ್ನು ಸಂತೋಷಗೊಳಿಸುತ್ತಾನೆ. ಕಾರಣವಾಗಿ ಚಾತುರ್ಮಾಸದ ವ್ರತ-ನಿಯಮಗಳನ್ನು ಆಚರಿಸಿ ಪರಮಾತ್ಮನ ಕೃಪೆಗೆ ಪಾತ್ರರಾಗಿ ನಾವೆಲ್ಲ ಧನ್ಯರಾಗಬೇಕು.

## ಆಷಾಢಮಾಸ

**ಚಾತುರ್ಮಾಸ (ಅವಧಿ) :**

ಆಷಾಢ ಶು|| ದಶಮಿಯಿಂದ ಪ್ರಾರಂಭವಾಗಿ ಕಾರ್ತಿಕ ಶು|| ದಶಮಿವರೆಗಿನ ನಾಲ್ಕು ತಿಂಗಳು ಚಾತುರ್ಮಾಸವಾಗಿದೆ. ದಕ್ಷಿಣಾಯಣ ಆರಂಭವಾಗಿರುತ್ತದೆ. ಆಷಾಢ ಮಾಸದಲ್ಲಿ ಮಳೆ ಜೋರಾಗಿ ಬೀಳುತ್ತಿರುತ್ತದೆ. ಹೊರಗೆ ಅಡ್ಡಾಡುವದು ಶ್ರಮದಾಯಕ. ಆಷಾಢ ಶು|| ಏಕಾದಶಿ ದಿವಸ ವೈಷ್ಣವರಾದವರು ಅವಶ್ಯವಾಗಿ ತಮ್ಮ ಮಠಾಧಿಪತಿಗಳಿಂದ ತಪ್ತ ಮುದ್ರಣ ಹಾಕಿಸಿಕೊಳ್ಳಬೇಕು. ಮರುದಿವಸ ದ್ವಾದಶಿ ತಿಥಿಯಿಂದ ಶಾಕವ್ರತ ಪ್ರಾರಂಭ. ಆಷಾಢ ಬ|| ಪಂಚಮಿ. ಶ್ರೀ ಟೀಕಾರಾಯರ ಪುಣ್ಯತಿಥಿ (ಮಳಖೇಡ), ಮಠಾಧಿಪತಿಗಳು, ಶ್ರೀ ಟೀಕಾರಾಯರ ದರ್ಶನ, ಆಶೀರ್ವಾದ ಪಡೆದು ಪಂಚಮಿ ಅಥವಾ ದಶಮಿ ದಿನವಂದು ಸಂಕಲ್ಪ ಮಾಡಿ ಭಾದ್ರಪದ ಶು|| ಹುಣ್ಣಿಮೆವರೆಗೆ ಒಂದೇ ಸ್ಥಳದಲ್ಲಿ ವಾಸವಾಗಿದ್ದು ಶ್ರೀ ರಾಮದೇವರ ಪೂಜೆ ಜಪ-ತಪಾದಿಗಳನ್ನು ಮಾಡುತ್ತ ಭಕ್ತ ಜನರಿಗೆ ಉಪದೇಶ ಮಾಡುವದಲ್ಲದೆ ಜ್ಞಾನ ಯಜ್ಞವನ್ನು ಮಾಡುತ್ತಿರುತ್ತಾರೆ. ಮಳೆಗಾಲದ ಈ ಸಮಯದಲ್ಲಿ ಅನೇಕ ಸಣ್ಣ ಪುಟ್ಟ ಜಂತುಗಳು, ಹುಟ್ಟಿಕೊಂಡು ಮಳೆಯ ನೀರಿನಲ್ಲಿ ಸಂಚಾರ ಮಾಡುತ್ತಿದ್ದು, ಅಡ್ಡಾಡುವಾಗ ನಮ್ಮ ಕಾಲಲ್ಲಿ ನಮಗೆ ಅರಿವು ಆಗದಂತೆ ಸಿಕ್ಕು ಜೀವ ಕಳೆದುಕೊಳ್ಳುತ್ತವೆ. ಅವುಗಳನ್ನು ಕೊಂದ ಪಾಪ ನಮಗೆ ಬರುವದುಂಟು. ಮಠಾಧಿಪತಿಗಳು ಈ ಕಾರಣದಿಂದ ಈ ಸಮಯದಲ್ಲಿ ಒಂದೇ ಸ್ಥಳದಲ್ಲಿದ್ದು ಜಪ-ತಪಾದಿ ಮಾಡುವ ಮುಖ್ಯ ಉದ್ದೇಶವೂ ಇದಾಗಿದೆ.

**ಚಾತುರ್ಮಾಸದ ವ್ರತ-ನಿಯಮಗಳು**

ಪ್ರಾರಂಭದಲ್ಲಿ ಶಾಕವ್ರತ : ಆಷಾಢ ಶು|| ದ್ವಾದಶಿಯಿಂದ ಶ್ರಾವಣ ಶು|| ದಶಮಿವರೆಗೆ.

ದಧಿವ್ರತ : ಶ್ರಾವಣ ಶು|| ದ್ವಾದಶಿಯಿಂದ ಭಾದ್ರಪದ ಶು|| ದಶಮಿವರೆಗೆ.

ಕ್ಷೀರವ್ರತ : ಭಾದ್ರಪದ ಶು|| ದ್ವಾದಶಿಯಿಂದ ಆಶ್ವಿನ ಶು|| ದಶಮಿವರೆಗೆ.

ದ್ವಿದಲವ್ರತ: ಆಶ್ವಿನ ಶು|| ದ್ವಾದಶಿಯಿಂದ ಕಾರ್ತಿಕ ಶು|| ದ್ವಾದಶಿವರೆಗೆ. (ಉತ್ಥಾನ ದ್ವಾದಶಿ).

ಶಾಕವ್ರತದಲ್ಲಿ : ತರಕಾರಿ ಕಾಯಿಪಲ್ಲೆ ಹುಳಿ, ಖಾರ, ಉಪಯೋಗಿಸಬಾರದು. ಬೇಳೆಯಿಂದ ತಯಾರಾಗುವ ಹಾಗೂ ಅಕ್ಕಿಯಿಂದ ತಯಾರಿಸುವ ಅಲ್ಲದೆ ಹಾಲು-ಮೊಸರು ಮಾತ್ರ ಆಹಾರವಾಗಿ ತೆಗೆದುಕೊಳ್ಳುವದು.

**ದಧಿವ್ರತದಲ್ಲಿ :** ಅಂದರೆ ಮೊಸರು ತಿನ್ನಬಾರದು. (ಮಜ್ಜಿಗೆ ಗ್ರಾಹ್ಯ).

**ಕ್ಷೀರವ್ರತ :** ಅಂದರೆ ಹಾಲು ಉಪಯೋಗಿಸಬಾರದು.

**ದ್ವಿದಲ ವ್ರತ :** ಬೇಳೆ ಕಾಳನ್ನು ಉಪಯೋಗಿಸಿದ ಆಹಾರ ಪದಾರ್ಥಗಳನ್ನು ತಿನ್ನಬಾರದು. ಅಲ್ಲದೆ ತರಕಾರಿ ಅಂದರೆ ಬಾಳೆಕಾಯಿ ದಿಂಡು, ಗೆಣಸು, ಮಾವಿನಕಾಯಿಯ ಸೋಲು ಬರುತ್ತವೆ.

ಹೀಗೆ ಆ ಆ ವ್ರತಗಳಲ್ಲಿ ಹೇಳಿದ ಪದಾರ್ಥಗಳನ್ನು ದೇವರ ನೈವೇದ್ಯಕ್ಕೂ ಇಡಬಾರದು. ಈ ಎಲ್ಲ ನೇಮವನ್ನು ಅಧಿಕ ಮಾಸದಲ್ಲಿಯೂ ಮಾಡಬೇಕು. ಮಾಡಿದರೆ ಅಧಿಕ ಪುಣ್ಯ.

**ಧಾರಣೆ-ಪಾರಣೆ :** ಈ ವ್ರತವನ್ನು ಆಷಾಢಮಾಸ ಅಥವಾ ಕಾರ್ತಿಕ ಮಾಸದಲ್ಲಿ ಪ್ರತಿಪದೆಯಿಂದ ಅಮಾವಾಸ್ಯದವರೆಗೆ ಒಂದು ತಿಂಗಳು ಅವಧಿ ಮಾಡಬೇಕು.

ಪ್ರತಿಪದೆ ದಿವಸ ಉಪವಾಸ ಮಾಡಿ ಮರುದಿವಸ ಬೆಳಿಗ್ಗೆ ಪಾರಣೆ ಮಾಡಬೇಕು. ಪ್ರಾರಂಭದಲ್ಲಿ ಪುಣ್ಯಾಹವಾಚನೆ ಮಾಡಿಸಿಕೊಂಡು ವ್ರತ ಪ್ರಾರಂಭಿಸಬೇಕು. ಅಂದು ಕೇವಲ ತೀರ್ಥ ಮಾತ್ರ ತೆಗೆದುಕೊಳ್ಳಬೇಕು. ಮರುದಿನ ಪಾರಣೆ ದಿವಸ ದಂಪತ್ತು ಭೋಜನ ಮಾಡಿಸಿ ಪಾರಣೆ ಮಾಡಬೇಕು. ದಂಪತ್ತು ಭೋಜನ ಸಾಧ್ಯವಾಗದಿದ್ದಲ್ಲಿ ಒಬ್ಬ ಬ್ರಾಹ್ಮಣ ಭೋಜನವನ್ನಾದರೂ ಮಾಡಿಸಬೇಕು. ಹೀಗೆ ಒಂದು ತಿಂಗಳು ಆಚರಿಸಿ ಈ ಅವಧಿಯಲ್ಲಿ ವ್ರತದ ಉದ್ಯಾಪನೆ ಮಾಡಬೇಕು. ಉದ್ಯಾಪನೆ ದಿವಸ, ಹೋಮ-ಹವನವನ್ನು ಪುರೋಹಿತರಿಂದ ತಿಳಿದುಕೊಂಡು ಅವರ ಮಾರ್ಗದರ್ಶನದಂತೆ ನಡೆದುಕೊಳ್ಳಬೇಕು.

**ಹವಿಸ್ಸು ಊಟ :** ಇದರ ಅವಧಿ 1 ತಿಂಗಳು.

ಅನ್ನ, ಹೆಸರುಬೇಳೆ, ಬಾಳೇಹಣ್ಣು, ಆಕಳಹಾಲು, ಸಕ್ಕರೆ ಬೆಲ್ಲ, ರವೆ, ಆಕಳತುಪ್ಪ ಇವುಗಳನ್ನು ತಮ್ಮಿಷ್ಟದಂತೆ ಬೆರೆಯಿಸಿ, ಬೇಯಿಸಿ ಆಹಾರವನ್ನಾಗಿ ಸ್ವೀಕರಿಸಬೇಕು. ಉಪ್ಪು, ಹುಳಿ, ಖಾರ ಗ್ರಾಹ್ಯವಲ್ಲ.

ಈ ವ್ರತವನ್ನು ಪುಣ್ಯಾಹವಾಚನೆ ಇಲ್ಲದೆ ಸಂಕಲ್ಪ ಮಾಡಿ ಪ್ರಾರಂಭಿಸ ಬಹುದು. ವ್ರತದ ಮುಕ್ತಾಯದಲ್ಲಿ ದಂಪತ್ತು ಭೋಜನ ಮಾಡಿಸಿ ತಾವೂ ಭೋಜನ ಮಾಡಬೇಕು. ಈ ವ್ರತವನ್ನು ಆಷಾಢ ಅಥವಾ ಕಾರ್ತಿಕ ಮಾಸದಲ್ಲಿ ಒಂದು ತಿಂಗಳ ಕಾಲ ಮಾಡಬೇಕು.

**ಚಂದ್ರಾಯಣ :** ಈ ವ್ರತದಲ್ಲಿ ಎರಡು ಪ್ರಕಾರಗಳು.

**ಒಂದನೇ ವಿಧಾನ :** ವ್ರತದ ದಿವಸವಾಗಿದ್ದರಿಂದ ವ್ರತದ ಅಡಿಗೆಯಿಂದ ಎಲ್ಲವನ್ನೂ ಸೇರಿಸಿ ಪ್ರತಿಪದೆ ದಿನ ಒಂದು ತುತ್ತು ಮಾತ್ರ ಊಟ ಮಾಡಿ 1 ಲೋಟ ನೀರು ಮಾತ್ರ

ಕುಡಿಯಬೇಕು. 24 ಘಂಟೆಗಳಲ್ಲಿ ಮತ್ತೆ ಏನೂ ಸೇವಿಸಬಾರದು. ನೀರೂ ಕುಡಿಯಬಾರದು. ಮರುದಿವಸ ದ್ವಿತಿಯಾ ದಿನದಂದು ಎರಡು ತುತ್ತು ಮಾತ್ರ ಊಟ ಮಾಡಬೇಕು. 3ನೇ ದಿನ 3 ತುತ್ತು ಅನ್ನ ನೀರು. ಅದರಂತೆ ನಾಲ್ಕನೇ ದಿವಸ ನಾಲ್ಕು ತುತ್ತು ಅನ್ನ ನೀರು. ಹೀಗೆ ಏಕಾದಶಿವರೆಗೆ ಒಂದೊಂದು ತುತ್ತು ಆಹಾರ-ನೀರು ಮಾಡುತ್ತ ಏಕಾದಶಿ ಪೂರ್ಣ ಉಪವಾಸ ಮಾಡಿ ದ್ವಾದಶಿ ದಿವಸ 12 ತುತ್ತು ಅನ್ನ-ನೀರು. ತ್ರಯೋದಶಿ 13 ತುತ್ತು ಅನ್ನ-ನೀರು. ಚತುರ್ದಶಿ 14 ತುತ್ತು ಅನ್ನ-ನೀರು. ಹುಣ್ಣಿಮೆ ದಿವಸ 15 ತುತ್ತು ಅನ್ನ-ನೀರು ತೆಗೆದುಕೊಳ್ಳಬೇಕು. ಮರುದಿವಸ ಪ್ರತಿಪದೆಯಿಂದ ಒಂದೊಂದು ತುತ್ತು ಆಹಾರ-ನೀರು ಕಡಿಮೆ ಮಾಡುತ್ತ ಏಕಾದಶಿ ಪೂರ್ಣ ಉಪವಾಸ ಮಾಡಿ ದ್ವಾದಶಿ, ತ್ರಯೋದಶಿ, ಚತುರ್ದಶಿ, ಆಹಾರ-ನೀರು ಸೇವಿಸಿ ಅಮಾವಾಸ್ಯ ಮತ್ತೆ ಪೂರ್ಣ ಉಪವಾಸ ಮಾಡಬೇಕು. (30 ದಿವಸ ಈ ವ್ರತವಾಗಿದ್ದು, ಈ ವ್ರತವನ್ನು ಆಷಾಢ ಅಥವಾ ಕಾರ್ತಿಕ ಮಾಸದಲ್ಲಿ ಮಾಡಬೇಕು). ಮರುದಿನ ಪ್ರತಿಪದೆ ದಿವಸ ತನಗೆ ಯೋಗ್ಯತೆ ಇದ್ದಂತೆ ಬ್ರಾಹ್ಮಣ ಸುವಾಸಿನಿಯರಿಗೆ ಸುಗ್ರಾಸ ಭೋಜನ ಮಾಡಿಸಿ ತಾನು ತೀರ್ಥ-ಪ್ರಸಾದ ಸ್ವೀಕರಿಸಬೇಕು. ಇದಕ್ಕೆ ಉದ್ಯಾಪನೆ ಮಾಡುವ ಸಂಪ್ರದಾಯವಿಲ್ಲ.

ಎರಡನೇ ವಿಧಾನ : ಪ್ರತಿಪದೆಯಿಂದ ಅಮವಾಸ್ಯ (30 ದಿನಗಳು)ವರೆಗೆ ಮಾಡಿದ ಅಡಿಗೆಯಲ್ಲಿ ದೇವರ ನೈವೇದ್ಯ ಆದ ನಂತರ ಎಂಟು ತುತ್ತು ಆಹಾರ ಮತ್ತು 8 ಲೋಟದವರೆಗೆ ನೀರು ಸ್ವೀಕರಿಸಬಹುದು. ಮೂವತ್ತು ದಿವಸಗಳಲ್ಲಿಯೂ ಇದರಂತೆ ಆಹಾರ ನೀರು ಸೇವಿಸಿ, ಏಕಾದಶಿ ಹಾಗೂ ಅಮವಾಸ್ಯ ದಿವಸ ಸಂಪೂರ್ಣ ಉಪವಾಸ ಮಾಡಿ ಪ್ರತಿಪದೆ ದಿವಸ ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಿ ತಾನು ತೀರ್ಥ-ಪ್ರಸಾದ ಸ್ವೀಕರಿಸಬೇಕು.

(a) ಏಕಭುಕ್ತ ಅಥವಾ ಏಕೋಂಡಿ (b) ಮೂಕ ಊಟ

(c) ದಿಕ್‌ಸಾಧನೆ (d) ಬಲಗೈಯಿಂದ ನೀರು ಕುಡಿಯುವದು.

ಈ ನಾಲ್ಕು ವ್ರತಗಳನ್ನು ಚಾತುರ್ಮಾಸ ಪ್ರಾರಂಭ ಅಂದರೆ ಆಷಾಢ ಶು|| ದ್ವಾದಶಿಯಿಂದ ಪ್ರಾರಂಭಿಸಿ ಕಾರ್ತಿಕ ಶು|| ದ್ವಾದಶಿವರೆಗೆ ಆಚರಿಸಿ ಉತ್ಥಾನ ದ್ವಾದಶಿ (ತುಲಸೀ ವಿವಾಹ ದಿನ) ದಿವಸ ಪಾರಣಿ ಮಾಡುವ ಮೂಲಕ ಮುಕ್ತಾಯಗೊಳಿಸಬೇಕು. ಹೀಗಾದಲ್ಲಿ ಈ ವ್ರತಗಳ ಪೂರ್ಣ ಫಲ ದೊರೆಯುತ್ತದೆ.

ಈ ವ್ರತಗಳನ್ನು ಆಚರಿಸುವಾಗ ಪಾಲಿಸಬೇಕಾದ ನಿಯಮಗಳು :

**i) ಏಕಭುಕ್ತವ್ರತ :** ಊಟಕ್ಕೆ ಕೂಡುವಾಗ ತನಗೆ ಬೇಕಾದ ಆಹಾರವನ್ನು ಎಲೆಯಲ್ಲಿ ಬಡಿಸಿಕೊಂಡು ಕೂಡಬೇಕು. ನಂತರ ಊಟ ಮುಗಿಯುವವರೆಗೂ ಏನೂ

ಬಡಿಸಿಕೊಳ್ಳಬಾರದು. ರಾತ್ರಿ ಊಟ ಮಾಡುವಾಗಲೂ ಇದೇ ನಿಯಮ. ಆದರೆ ಸಾಕಷ್ಟು ನೀರು ಕುಡಿಯಬಹುದು.

**ii) ಮೂಕ ಊಟ :** ಊಟ ಮಾಡುವಾಗ ಯಾವುದೇ ಕಾರಣದಿಂದ ಮಾತನಾಡಬಾರದು. ಆದರೆ ರಾಮ-ಕೃಷ್ಣ ಅಂತಾ ದೇವರನ್ನು ನೆನೆಯಬಹುದು.

**iii) ದಿಕ್-ಸಾಧನೆ :** ಚಾತುರ್ಮಾಸ ಪ್ರಾರಂಭದಿಂದಲೇ ಈ ವ್ರತವನ್ನು ಪ್ರಾರಂಭಿಸಬೇಕು. ನಾಲ್ಕು ತಿಂಗಳಿನ ಈ ಅವಧಿಯಲ್ಲಿ ಒಂದೊಂದು ತಿಂಗಳು ಒಂದೊಂದು ದಿಕ್ಕು ಸಾಧಿಸಬೇಕು. ಅಂದರೆ, ಆಷಾಢ ಶು|| ದ್ವಾದಶಿಯಿಂದ ಶ್ರಾವಣ ಶು|| ದಶಮಿ ಒಂದು ತಿಂಗಳು ಪೂರ್ವದಿಕ್ಕಿಗೆ ಮುಖ ಮಾಡಿ ಊಟಮಾಡಬೇಕು. ಶ್ರಾವಣ ಶು|| ದ್ವಾದಶಿಯಿಂದ ಭಾದ್ರಪದ ಶು|| ದಶಮಿವರೆಗೆ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಭಾದ್ರಪದ ದ್ವಾದಶಿಯಿಂದ ಆಶ್ವಿನ ಶು|| ದಶಮಿವರೆಗೆ ಪಶ್ಚಿಮ ದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಆಶ್ವಿನ ಶು|| ದ್ವಾದಶಿಯಿಂದ ಕಾರ್ತಿಕ ಶು|| ದಶಮಿವರೆಗೆ ಉತ್ತರ ದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಹೀಗೆ ಆಚರಿಸಿ ಕಾರ್ತಿಕ ಶು|| ದ್ವಾದಶಿ (ಉತ್ಥಾನ ದ್ವಾದಶಿ) ದಿವಸ ತುಲಸೀದೇವಿ ಮದುವೆ ನಿಮಿತ್ತವಾಗಿ ಬಂಧು-ಬಳಗದವರೊಡಗೂಡಿ ದಂಪತ್ತು ಭೋಜನ ಮಾಡಿಸಿ ತೀರ್ಥ-ಪ್ರಸಾದ ಸ್ವೀಕರಿಸಿ ಈ ವ್ರತವನ್ನು ಮುಗಿಸಬೇಕು. ಸಾಯಂಕಾಲ ಕಾರ್ತಿಕ ರಾಧಾ-ದಾಮೋದರ ವಿವಾಹವನ್ನು ವಿಜೃಂಭಣೆಯಿಂದ ಆಚರಿಸಬೇಕು. ಆ ದಿನ ವ್ರತಗಳ ಸಮಾಪ್ತಿ ಆಗುವದರಿಂದ ಬೇಕಾದ ಪಕ್ವಾನ್ನಮಾಡಿ ದೇವರಿಗೆ ಸಮರ್ಪಿಸಿ ಅತಿಥಿ ಅಭ್ಯಾಗತರಿಗೆ ತೃಪ್ತಿ ಪಡಿಸಿ ತಾವೂ ತೀರ್ಥ-ಪ್ರಸಾದ ಸ್ವೀಕರಿಸಬೇಕು.

**iv) ಬಲಗೈಯಿಂದ ನೀರು ಕುಡಿಯುವದು :** ಊಟ ಮಾಡುವಾಗ ಸಾಮಾನ್ಯವಾಗಿ ಎಡಗೈಯಿಂದ ನೀರು ಕುಡಿಯುವದನ್ನು ನಾವು ಕಾಣುತ್ತೇವೆ. ನ್ಯಾಯವಾಗಿ ಬಲಗೈಯಿಂದಲೇ ನೀರು ಕುಡಿಯುವದು ಶಾಸ್ತ್ರ ಸಮ್ಮತವಾಗಿದೆ. ಹೀಗಾಗಿ ಈ ನಾಲ್ಕು ತಿಂಗಳಾದರೂ ಬಲಗೈಯಿಂದಲೇ ನೀರು ಕುಡಿಯಬೇಕು. ಇದೂ ಒಂದು ವ್ರತವಾಗಿದೆ.

**ದಾನಧರ್ಮದ ವಿಚಾರ :**

**ಏಕೋಡಿ :** ವ್ರತ ಮಾಡಿ ಮುಗಿಸಿದ ದಿವಸ ಸತ್ಪಾತ್ರದಲ್ಲಿ ಒತ್ತಾಳೆ ಪರಾತ ದಾನ ಮಾಡಬೇಕು.

**ಮೂಕ ಊಟ :** ಈ ವ್ರತಮಾಡಿ ಝಾಂಗಟೆ ಅಥವಾ ಗಂಟೆ ದಾನ ಮಾಡಬೇಕು.

**ದಿಕ್‌ಸಾಧನೆ :** ಈ ವ್ರತಮಾಡಿ ದೀಪದಾನ ಅಂದರೆ, ಸಮೆಯಲ್ಲಿ ದೀಪಹಚ್ಚಿ ದೀಪಸಹಿತ ದಾನ ಮಾಡಬೇಕು.

ಬಲಗೈಯಿಂದ ನೀರು ಕುಡಿಯುವುದು : ಈ ವ್ರತ ಮಾಡಿ ಬಿಟ್ಟರೆ ತಾಮ್ರದ ಅಥವಾ ಹಿತ್ತಾಳೆ ಲೋಟವನ್ನು ದಾನ ಮಾಡಬೇಕು.

**v) ಅಖಂಡವ್ರತ :** ನಿತ್ಯ ಮಧ್ಯಾಹ್ನ ಮಾತ್ರ ಒಂದು ಸಲ ಊಟ ಮಾಡಿ ಬೇಕಾಗುವಷ್ಟು ನೀರು ಕುಡಿಯಬಹುದು. ನಂತರ ಮರುದಿನದವರೆಗೂ ಏನೂ ಆಹಾರ ನೀರು ಸೇವಿಸಬಾರದು. ಈ ಪ್ರಕಾರ ನಾಲ್ಕು ತಿಂಗಳು (ಚಾತುರ್ಮಾಸ) ಆಚರಿಸಬೇಕು. ಇದು ಸಾಧ್ಯವಾಗದಿದ್ದಲ್ಲಿ ನಾಲ್ಕು ತಿಂಗಳಲ್ಲಿ ಬರುವ ದಶಮಿ-ದ್ವಾದಶಿಗಳ ದಿನಗಳಲ್ಲಾದರೂ ಸಾಧಿಸಬೇಕು. ಈ ಅವಧಿಯಲ್ಲಿ ಯೋಗ್ಯ, ಬ್ರಾಹ್ಮಣರನ್ನು ಕರೆದು ವ್ರತದ ಫಲಹಾರವನ್ನು ಮಾಡಿ ಹಾಕಿ ಅವರನ್ನು ತೃಪ್ತಿಗೊಳಿಸಬೇಕು.

**vi) ಏಕನ್ನ :** ಈ ವ್ರತವನ್ನು ಆಷಾಢ ಅಥವಾ ಕಾರ್ತಿಕ ಮಾಸದಲ್ಲಿ ಒಂದು ತಿಂಗಳು ಆಚರಿಸಬೇಕು. ಮುಖ್ಯವಾಗಿ ಆಕಳಹಾಲು ಹಾಗೂ ಅನ್ನ ಮಾತ್ರ ಹೊಟ್ಟೆ ತುಂಬುವಷ್ಟು ಸ್ವೀಕರಿಸಬಹುದು. ಸಾಕಷ್ಟು ನೀರು ಕುಡಿಯಬಹುದು. ದಿನದಲ್ಲಿ ಒಮ್ಮೆ ಮಾತ್ರ ಹೀಗೆ ಆಹಾರ ಸ್ವೀಕರಿಸಬೇಕು. ವ್ರತ ಮಾಡಿ ಅನ್ನದ ಪಾತ್ರೆ, ಹಾಲಿನ ಪಾತ್ರೆ (ಮುಚ್ಚಳ ಸಹಿತ) ಗಳನ್ನು ಸತ್ಪಾತ್ರದಲ್ಲಿ ದಾನವಾಗಿ ಕೊಡಬೇಕು.

**ದಿವಸಿ ಅಮಾವಾಸ್ಯ (ಗೌರೀಪೂಜೆ) :**

ಈ ದಿವಸ ಗೌರಿಪೂಜೆಯನ್ನು ಮದುವೆ ಆಗುವ ಹುಡುಗಿಯರು ಅವಶ್ಯವಾಗಿ ಮಾಡಬೇಕಾದ ವ್ರತವಾಗಿದೆ. ಮಣ್ಣಿನಿಂದ ಎರಡು ಕುಂತಿಗಳನ್ನು (ಗೌರಿ) ಮಾಡಿ ಶೃಂಗರಿಸಿ, ಅರಿಷಿಣ ಕುಂಕುಮ, ಗೆಜ್ಜೆವಸ್ತ್ರ, ಹೂ, ಏರಿಸಿ ಆರತಿ ಮಾಡಬೇಕು. ಬೇಗನೇ ಯೋಗ್ಯ ವರನೊಂದಿಗೆ ಮದುವೆ ಆಗುವಂತೆ ಗೌರಿ (ಪಾರ್ವತಿ) ಯನ್ನು ಪ್ರಾರ್ಥಿಸಿಕೊಳ್ಳಬೇಕು. ಮದುವೆ ಆದ ನಂತರವೂ ಸತತ 9 ವರ್ಷ ಆಷಾಢ ಅಮಾವಾಸ್ಯ ದಿನದಂದು ದಿವಸಿ ಗೌರಿ ಪೂಜೆಯನ್ನು ಭಕ್ತಿಯಿಂದ ಮಾಡಬೇಕು. ಮದುವೆ ಆದ ವರ್ಷದಲ್ಲಿ ಬರುವ ಆಷಾಢ ಮಾಸದಲ್ಲಿ ಅತ್ತೆಯ ಜೊತೆ ಇರಬಾರದೆಂದು ರೂಢಿ ಇರುವುದರಿಂದ ತವರು ಮನೆಗೆ ಮಗಳು ಬಂದು ಇರಬೇಕು. ಮದುವೆ ಆದ ಈ ಹೊಸ ವರ್ಷದಲ್ಲಿ ಮಾತ್ರ ಅಮಾವಾಸ್ಯೆ ದಿನದಂದು ಗೌರಿಪೂಜೆ ಮಾಡದೆ ಆಷಾಢ ಬ|| ದ್ವಾದಶಿ ಸಂಜೆಗೆ ಮಾಡಬೇಕು. ಅಂದು ಅತ್ತೆ ಮನೆ ಅವರು (ಬೀಗರು) ಮಂಗಳ ಗೌರಿಯನ್ನು ಬಾಗಿಣ, ತಪ್ಪೇಲಿ (ತಪ್ಪೇಲಿಯಲ್ಲಿ ಅಕ್ಕಿ, ತೆಂಗಿನಕಾಯಿ ಒಣಕೊಬ್ಬರಿ ಬಟ್ಟಲಿ, ಅಡಿಕೆ ಬೆಟ್ಟ ತುಂಬಿರಬೇಕು). ಸೊಸೆಗೆ ಹಾಗೂ ಬೀಗಿತ್ತೆ (ಸೊಸೆಯ ತಾಯಿ)ಗೆ ಹೊಸ ಸೀರೆಗಳನ್ನು (5 ಖಣ ಸಹಿತವಾಗಿ) ತಂದು ಉಡುಗೊರೆಯಾಗಿ ಕೊಟ್ಟು, ಎಲ್ಲರೂ ಸೇರಿ ಗೌರಿ ಪೂಜೆ ಮಾಡಿ ಸಂತೋಷದಿಂದ ಭೋಜನ ಮಾಡಿ ಊರಿಗೆ ವಾಪಸ ಹೋಗುವದು ಪದ್ಧತಿಯಾಗಿದೆ. ನಂತರದ 8 ವರ್ಷಗಳ ಗೌರಿ ಪೂಜೆ ಮಂಗಳ ಗೌರಿ ಜೊತೆ ಆಷಾಢ ಮಾಸದ ಅಮಾವಾಸ್ಯ ದಿನವೇ ಆಚರಿಸಬೇಕು.

ಹೀಗೆ 9 ವರ್ಷದ ಗೌರಿಪೂಜೆಯನ್ನು ಶ್ರದ್ಧೆಯಿಂದ ನಡೆಸಬೇಕು. ಪೂಜೆ ಮಾಡುವಾಗ 9 ಎಳೆ ದಾರವನ್ನು ಒಂದೇ ಎಳೆ ದಾರವನ್ನಾಗಿ ಮಾಡಿ ತೊಂಬಿಸಿ ಅದಕ್ಕೆ 9 ಗಂಟು ಹಾಕಿ ಅರಿಷಿಣ ಹಚ್ಚಿ ಮೊದಲು ಗೌರಿಗೆ ಏರಿಸಿ ತನ್ನ ಕೊರಳಲ್ಲಿ ಹಾಕಿಕೊಳ್ಳಬೇಕು. ಹೀಗೆ ಹಾಕಿಕೊಂಡ ದಾರವನ್ನು ಶ್ರಾವಣಮಾಸದಲ್ಲಿ ನಾಗರಚೌತಿ ದಿವಸ ತೆಗೆದು ತುಲಸೀ ಕಟ್ಟೆಯಲ್ಲಿ ಇಡಬೇಕು. ನಂತರ ಗೌರಿ ಮುಂದೆ ಸಮೆಯಲ್ಲಿ ಹಚ್ಚಿಟ್ಟಿದ್ದ ದೀಪಕ್ಕೆ ಅರಿಷಿಣ, ಕುಂಕುಮ, ಗೆಜ್ಜೆವಸ್ತ್ರ, ಹೂ ಏರಿಸಿ ಆರತಿ ಮಾಡಬೇಕು. ಅಮವಾಸ್ಯೆ ಗೌರಿಪೂಜೆ ನಂತರ ಗೋದಿ ಹಿಟ್ಟಿನಲ್ಲಿ ಸ್ವಲ್ಪ ಅರಿಷಿಣ ಪುಡಿ ಸೇರಿಸಿ ಹಾಲು ಹಾಕಿ ಗಟ್ಟಿಯಾಗಿ ಕಲಿಸಿ ಅದರಿಂದ ಎರಡು ಬಟ್ಟಲು ಆಕಾರ ಮಾಡಿ ಒಂದು ಬಟ್ಟಲಲ್ಲಿ ನೆನೆಸಿದ ಕಡ್ಲಿಬೇಳೆಯನ್ನು ಒಂದು ಬಟ್ಟಲು ತುಂಬ ಹಾಕಿ ಇನ್ನೊಂದು ಬಟ್ಟಲವನ್ನು ಅದರ ಮೇಲೆ ಮುಚ್ಚಬೇಕು. ಮನೆಯಲ್ಲಿ ಅಣ್ಣ ತಮ್ಮ ಯಾರಿಂದಲಾದರೂ ಮೇಲೆ ಮುಚ್ಚಿದ ಬಟ್ಟಲವನ್ನು ತೆಗೆಯಿಸಬೇಕು. ನಂತರ ಅದರಲ್ಲಿ ಇರಿಸಿದ್ದ ನೆನೆದ ಬೇಳೆಕಾಳನ್ನು ಅವರಿಗೆ ತಿನ್ನಲಿಕ್ಕೆ ಕೊಟ್ಟು ಆರತಿ ಮಾಡಬೇಕು. ತವರು ಮನೆ ಶ್ರೀಮಂತವಾಗಲೆಂದು ಹಾರೈಸುವದಲ್ಲದೆ ಸೌಭಾಗ್ಯ ದೊರಕಲೆಂಬುದೇ ಈ ಕಾರ್ಯಕ್ರಮದ ಉದ್ದೇಶವಾಗಿದ್ದು ಇದಕ್ಕೆ "ಭಂಡಾರ ಒಡೆಯುವದು" ಅಂತಾ ಹೇಳುತ್ತಾರೆ.

ಈ ದಿವಸ ಗೌರಿ ಪೂಜೆಯ ಕಥೆ ಹೀಗೆ :

"ಹಿಂದಕ್ಕೆ ಒಂದು ಊರಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದನು. ಅವನಿಗೆ ಹೆಣ್ಣು ಗಂಡು ಸೇರಿ ಏಳು ಜನ ಮಕ್ಕಳಿದ್ದರು. ಈ ಬ್ರಾಹ್ಮಣ ದಂಪತ್ತು ಕಾಶೀ ಯಾತ್ರೆ ಮಾಡುವ ಉದ್ದೇಶದಿಂದ ತನ್ನ ಏಳೂ ಮಕ್ಕಳ ಸಂರಕ್ಷಣೆ ಜವಾಬ್ದಾರಿಯನ್ನು ತನ್ನ ಹಿರಿಯ ಮಗನಿಗೆ ಒಪ್ಪಿಸಿ ಯಾತ್ರೆಗೆ ಹೊರಡುತ್ತಾರೆ. ಈ ಅವಧಿಯಲ್ಲಿ ಆ ಊರ ಅರಸನ ಮಗನು ಅಕಾಲ ಮೃತ್ಯುವನ್ನು ಹೊಂದುತ್ತಾನೆ. ಅವನಿಗೆ ಮದುವೆ ಆಗಿರುವದಿಲ್ಲ. ಮದುವೆ ಆಗದೇ ಹೆಣವನ್ನು ದಹನ ಮಾಡುವ ಪದ್ಧತಿ ಇರುವದಿಲ್ಲ. ಹೀಗಾಗಿ ಅರಸನು ಚಿಂತಾಕ್ರಾಂತನಾಗಿರುವಾಗ ಆತನಿಗೆ ಒಂದು ವಿಚಾರ ಬರುತ್ತದೆ. ಯಾರು ಈ ಹೆಣದ ಜೊತೆ ಮದುವೆ ಆಗಲು ಒಪ್ಪುತ್ತಾರೋ ಅವರಿಗೆ ತನ್ನ ರಾಜ್ಯದಲ್ಲಿಯ ಅರ್ಧ ಭಾಗವನ್ನು ಕೊಡಲು ಡಂಗುರ ಸಾರುತ್ತಾನೆ. ಈ ವಿಚಾರ ತಿಳಿದ ಬಡಬ್ರಾಹ್ಮಣನ ಹಿರಿಯ ಮಗ ಈ ವಿಷಯವನ್ನು ತನ್ನ ತಂಗಿಗೆ ತಿಳಿಸಿ ಆಕೆಯು ಒಪ್ಪಿಕೊಂಡಲ್ಲಿ ಬಡತನದಿಂದ ಕಷ್ಟಪಡುತ್ತಿರುವ ತಮ್ಮ ಸಂಸಾರಕ್ಕೆ ಸುಖವಾಗುವದೆಂದು ಮನಗಾಣಿಸಿ ಆಕೆಯ ಒಪ್ಪಿಗೆ ಪಡೆದು ರಾಜನ ಮಗನ ಹೆಣದ ಸಂಗಡ ಆಕೆಯ ಮದುವೆ ಮಾಡುತ್ತಾನೆ. ನಂತರ ರಾಜನು ಸತ್ತ ತನ್ನ ಮಗನ ಹೆಣವನ್ನು ತೆಪ್ಪದಲ್ಲಿಟ್ಟು ನದಿಯಲ್ಲಿ ತೇಲಿ ಬಿಡುತ್ತಾನೆ. ಗಂಡನು ಇಲ್ಲದೆ ತಾನು ಮಾತ್ರ ಬದುಕಿ ಇರುವದು ಬೇಡವೆಂದು ತಿಳಿದು ಗಂಡನ ಹೆಣದ ಜೊತೆ ತಾನೂ ತೆಪ್ಪದಲ್ಲಿ ಪ್ರಯಾಣ ಮಾಡುತ್ತಾಳೆ. ಆ ತೆಪ್ಪವು ತೇಲುತ್ತ, ತೇಲುತ್ತ, ಮರುದಿನ ಆ

ತೆಪ್ಪವು ನದಿಯ ದೂರದ ಇನ್ನೊಂದು ದಡಕ್ಕೆ ಬಂದು ನಿಲ್ಲುತ್ತದೆ. ಆ ದಿನ ದಿವಸಿ ಅಮವಾಸ್ಯೆ ಇದ್ದುದರಿಂದ ದನಕಾಯುವ ಹುಡುಗರು ತಾವು ಭಂಡಾರ ಒಡೆದು ಬಂದವರ ಸುದ್ದಿ ಮಾತನಾಡುತ್ತಾ ನದಿಯ ದಂಡೆಯಲ್ಲಿ ವಿಶ್ರಾಂತಿ ಪಡೆಯುತ್ತಿರುತ್ತಾರೆ. ಅದೇ ಸಮಯಕ್ಕೆ ತೆಪ್ಪದಲ್ಲಿ ಬಂದ ಅಭಾಗ್ಯ ಸ್ತ್ರೀಯು ಕೇಳಿಸಿಕೊಂಡು ತಾನೂ ಗೌರಿಪೂಜೆ ಮಾಡಿ ಗೌರಿಯ ಕೃಪೆ ಪಡೆಯಬೇಕೆಂದು ಬಯಸಿ ತಕ್ಷಣ ನದಿಯಲ್ಲಿ ಸ್ನಾನ ಮಾಡಿ ಮರಳಿನಿಂದ ಗೌರಿ ಮೂರ್ತಿ ಮಾಡಿ ನದಿಯ ದಂಡೆಯ ಮೇಲಿಟ್ಟು ತಾನುಟ್ಟ ಹೊಸ ಸೀರೆಯಿಂದ ಎಳೆ ಎಳೆ ತೆಗೆದು ಮಳಲಿನ ಗೌರಿಗೆ ಏರಿಸಿದ್ದಲ್ಲದೆ ಅಲ್ಲಿ ಸಿಕ್ಕ ಹೂಗಳನ್ನೂ ಏರಿಸಿದಳು. ಆದರೆ ಭಂಡಾರ ಒಡೆಯಲು ತನಗೆ ಯಾರೂ ಗತಿಯಿಲ್ಲವೆಂದು ದುಃಖಪಡುತ್ತ ತನಗೆ ಒದಗಿದ ಈ ದುರ್ಧರ ಪ್ರಸಂಗದಿಂದ ಪಾರುಮಾಡಿ ಸೌಭಾಗ್ಯವನ್ನು ಕೊಡಬೇಕೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿಕೊಂಡಳು. ಪಾರ್ವತಿ ಪರಮೇಶ್ವರರು ಈಕೆಯ ರೋದನವನ್ನು ಕೇಳಿ ವೇಷ ಬದಲಾಯಿಸಿಕೊಂಡು ಆಕೆಗೆ ಪ್ರತ್ಯಕ್ಷವಾಗುತ್ತಾರೆ. ಹಾಗೂ ಆಕೆಯ ಇಂಗಿತ ತಿಳಿದು ತಾವು ಭಾಂಡಾರ ಒಡೆಯುವವಾಗಿ ಹೇಳಿ ಅದರಂತೆ ಆಕೆಯ ಇಚ್ಛೆಯನ್ನು ಪೂರೈಸಿ ತಮ್ಮ ನಿಜರೂಪವನ್ನು ಪ್ರದರ್ಶಿಸಿ ಆಕೆಗೆ ಸೌಭಾಗ್ಯ ಪ್ರಾಪ್ತವಾಗಲೆಂದು ಹರಸಿ ಅದೃಶ್ಯವಾಗುತ್ತಾರೆ. ಆ ಕ್ಷಣದಲ್ಲಿ ಆಕೆಯ ಮೃತ ಪತಿಯು ಮಲಗಿದವನು ಎದ್ದಂತೆ ಎದ್ದು ಕೂಡುತ್ತಾನೆ. ಈ ಅಘಟಿತ ಘಟನೆಯು ರಾಜನಿಗೆ ತಿಳಿದು ಪುನರ್ಜನ್ಮ ಹೊಂದಿದ ತನ್ನ ಮಗ ಹಾಗೂ ಸೊಸೆಯನ್ನು ಸಕಲ ರಾಜ ಮರ್ಯಾದೆಯೊಂದಿಗೆ ಪುರಪ್ರವೇಶ ಮಾಡಿ ವಿಜಯೋತ್ಸವವನ್ನು ನಡೆಸುತ್ತಾನೆ".

ಹೀಗೆ ನಡೆದ ಈ ಘಟನೆಯ ಹಿನ್ನೆಲೆಯಲ್ಲಿ ಇಂದಿಗೂ ಸುಮಂಗಲೆಯರು 'ದಿವಸಿಗೌರಿ' ವ್ರತವನ್ನು ಆಚರಿಸುತ್ತಾರೆ.

## ಶ್ರಾವಣಮಾಸ

ಈ ಮಾಸದಲ್ಲಿ ಬರುವ ಸೋಮವಾರ ದಿವಸ ಈಶ್ವರನ ವಾರವಾಗಿದ್ದು ಅಂದು ಈಶ್ವರನ ಪೂಜೆ (ಶಿವ-ಪಾರ್ವತಿ) ಯನ್ನು ವಿಶೇಷ ರೀತಿಯಿಂದ ಆಚರಿಸಬೇಕು. ಇದಕ್ಕೆ ಸೋಮ-ಸೋಮವಾರ ಪೂಜೆ ಎಂದೂ ಕರೆಯುತ್ತಾರೆ. ಶಿವ ಪಾರಿಜಾತ (ಅನಂತಾದ್ರಿ ವ್ರತ) ವನ್ನು ಪಾರಾಯಣ ಮಾಡಬೇಕು.

**ಮಂಗಳವಾರ ದಿವಸ ಮಂಗಳಗೌರಿ ಪೂಜೆ :**

ಈ ವ್ರತವನ್ನು ಮದುವೆ ಆದ ವರ್ಷದಿಂದ ಪ್ರಾರಂಭಿಸಿ ಐದು ವರ್ಷ ತಪ್ಪದೇ ಆಚರಿಸಬೇಕು. ದಿವಸಿ ಅಮಾವಾಸ್ಯೆ ದಿವಸ ಅತ್ತೆ ಮನೆಯವರು ಕೊಟ್ಟ ಮಂಗಳ ಗೌರಿಯನ್ನು ಸರಿಯಾದ ಸ್ಥಳದಲ್ಲಿಟ್ಟು, ಅಲಂಕರಿಸಿ ಗೌರಿ ಮುಂದೆ 8 ವೀಳೆದೆಲೆ ಮೇಲೆ ಒಣ ಕೊಬ್ಬರಿ ಬಟ್ಟಲು ಇಟ್ಟು, ಅದರಲ್ಲಿ 8 ಅಡಕಬೆಟ್ಟ ಇಡಬೇಕು. ಗೌರಿಗೆ ಅರಿಷಿಣ-ಕುಂಕುಮ, ಗೆಜ್ಜೆವಸ್ತ್ರದ ಹೂ ಏರಿಸಿ ಆರತಿ ಮಾಡಬೇಕು ಹಾಗೂ ಬಾಗಿಣ ಇಟ್ಟುಕೊಳ್ಳಬೇಕು. ಈ ಪ್ರಸಂಗದಲ್ಲಿ ಅತ್ತೆಮನೆಯವರು ಕೊಟ್ಟ ತಪ್ಪೇಲಿಯಲ್ಲಿ ಅರಿಷಣ-ಕುಂಕುಮ, ಉತ್ತತ್ತಿ, ಅಡಕಿಬೆಟ್ಟ, ಒಣಕೊಬ್ಬರಿ ಬಟ್ಟಲು ಹಾಕಿ ಖಣದಿಂದ ತಪ್ಪೇಲಿಯ ಬಾಯಿ ಕಟ್ಟಿ ಮೇಲೆ ತೆಂಗಿನಕಾಯಿ ಇರಿಸಿ ತನ್ನ ತಾಯಿಗೆ ಮಗಳು ಕೊಡಬೇಕು. ನಂತರ ತಾಯಿ ಮಗಳಿಗೆ ಆರತಿ ಮಾಡಬೇಕು. ಹೀಗೆ ಪೂಜಿಸುವಾಗ ತಮ್ಮ ಸಮಯದಲ್ಲಿ ಮದುವೆ ಆದ ಗೆಳತಿಯರನ್ನು ಕರೆದು ಎಲ್ಲರೂ ಸೇರಿ ಸಂಭ್ರಮದಿಂದ ಗೌರಿಪೂಜೆ ಮಾಡಬೇಕು. ಗೆಳತಿಯರಿಗೆಲ್ಲ ಆದರಾತಿಥ್ಯ ಮಾಡಬೇಕು. ಸಾಯಂಕಾಲ ಮುತ್ತೈದೆಯರನ್ನು ಕರೆದು ಅರಿಷಿಣ-ಕುಂಕುಮ, ಹೂ, ಎಲೆ-ಅಡಿಕೆ, ನೆನೆಸಿದ ಕಡ್ಲಿ, ಹಣ್ಣು ಕೊಟ್ಟು ಸತ್ಕರಿಸಬೇಕು. ರಾತ್ರಿ ಜಾಗರಣೆ ಮಾಡಿ ಪಾರ್ವತಿ-ಪರಮೇಶ್ವರ, ವಾಯುದೇವರು, ಪರಮಾತ್ಮನ ಭಜನೆ ಹಾಗೂ ಹಾಡುಗಳನ್ನು ಹೇಳಿ ಗೆಳತಿಯರೊಡನೆ ಅನೇಕ ಆಟಗಳನ್ನು ಆಡಿ ಬೆಳಗಿನ ಜಾವದಲ್ಲಿ ಮತ್ತೆ ಗೌರಿಗೆ ಆರತಿ ಬೆಳಗಬೇಕು. ಹೀಗೆ ಈ ವ್ರತವನ್ನು ಆಚರಿಸಬೇಕು. ಇದಕ್ಕೆ ಒಂದು ಇತಿಹಾಸವಿದೆ. ಅದು ಹೀಗೆ –

"ಹಿಂದಕ್ಕೆ ಒಬ್ಬ ರಾಜನಿದ್ದನು. ಅವನಿಗೆ ಮಕ್ಕಳೇ ಇರಲಿಲ್ಲ. ಅವನು ತಪಸ್ಸು ಮಾಡಿ ಒಬ್ಬ ಮಗನನ್ನು ಪಡೆದನು. ಆದರೆ ಅವನು ಅಲ್ಪಾಯುಷ್ಯವುಳ್ಳವನಾಗಿದ್ದನು. ಅವನಿಗೆ 16 ವರ್ಷದ ತಾರುಣ್ಯದಲ್ಲಿಯೇ ಮರಣವೆಂದು ಬ್ರಹ್ಮನು ಬರೆದಿದ್ದನು. ರಾಜನು ಈ ವಿಷಯ ತಿಳಿದಿದ್ದನು. ಮಗನು ದೀರ್ಘಾಯುಷಿ ಆಗಲೆಂದು ಅನೇಕ ಸತ್ಕಾರ್ಯ ಮಾಡುತ್ತಿದ್ದನು. ಮಗನಿಗೆ ಪವಿತ್ರ ಗಂಗಾ ಸ್ನಾನ ಮಾಡಿಸಬೇಕೆಂದು ಸೋದರಮಾವನನ್ನು ಜೊತೆ ಮಾಡಿ ತೀರ್ಥ ಯಾತ್ರೆಗೆ ಕಳಿಸುತ್ತಾನೆ. ಹೀಗೆ ರಾಜಕುಮಾರ

ಹಾಗೂ ಆವನ ಸೋದರಮಾವ ಯಾತ್ರಾರ್ಥಿಯಾಗಿ ಹೊರಟಾಗ ಹಾದಿಯಲ್ಲಿ ಇನ್ನೊಂದು ರಾಜಧಾನಿ ಸ್ಥಳ ಸಿಗುತ್ತದೆ. ಅಲ್ಲಿಯ ರಾಜನ ಮಗಳ ಮದುವೆ ಸಮಾರಂಭ ನಡೆದಿರುತ್ತದೆ. ಈ ಮದುವೆ ಆ ರಾಜ್ಯದ ಒಬ್ಬ ಕುತಂತ್ರ ಅಧಿಕಾರಿಯೊಬ್ಬನ ಯೋಜನೆಯಂತೆ ಒಬ್ಬ ಕುಷ್ಠರೋಗಿಯ ಜೊತೆ ನಡೆಯುವುದು ಇರುತ್ತದೆ. ಮದುವೆ ಬಹುಜನರ ಸಮಕ್ಷಮದಲ್ಲಿ ನಡೆಯಬೇಕಾದ್ದರಿಂದ ಲಗ್ನ ಮುಹೂರ್ತಕ್ಕೆ ಮಾತ್ರ ಎಲ್ಲರಿಗೂ ಒಪ್ಪುವಂಥ ವರನ ಶೋಧನೆ ನಡೆದಿರುತ್ತದೆ. ಮದುವೆಯ ಅಕ್ಕಿಕಾಳು ಬಿದ್ದಮೇಲೆ ಆ ವರನನ್ನು ಬೇರ್ಪಡಿಸಿ ನಿಯೋಜಿತ ಗಂಡಿನ (ಕುಷ್ಠರೋಗಿ) ಜತೆ ರಾಜಕುಮಾರಿಯನ್ನು ಕೊಟ್ಟು ಕಳಿಸಲು ಎಲ್ಲ ಸಿದ್ಧತೆಯಾಗಿರುತ್ತದೆ. ಈಗ ಇಂಥ ವರ ಯಾರು ? ಎಂದು ಹುಡುಕುವಾಗ ಕಾಶೀಯಾತ್ರೆಗೆ ಹೊರಟ ಈ ರಾಜಕುಮಾರನನ್ನು ಸಂಧಿಸಿ ರಾಜಕುಮಾರಿಯನ್ನು ಆತನಿಗೆ ಮದುವೆ ಮಾಡಿ ಕೊಡುವದಾಗಿ ನಂಬಿಸುತ್ತಾರೆ. ಈ ರಾಜಕುಮಾರನ ಸೋದರಮಾವನಿಗೆ ಈ ಎಲ್ಲ ವಿಷಯ ಗೊತ್ತು. ಆದರೂ ಆ ರಾಜಕುಮಾರಿಯ ಬಾಸಿಂಗ ಬಲದಿಂದಲಾದರೂ ತನ್ನ (ಸೋದರಿ) ಅಳಿಯ ದೀರ್ಘಾಯುಷಿ ಏಕೆ ಆಗಬಾರದೆಂದು ಗ್ರಹಿಸಿ ಮದುಮಗನನ್ನಾಗಿ ತನ್ನ ಅಳಿಯನನ್ನು ಒಪ್ಪಿಸುತ್ತಾನೆ. ಮದುವೆ ಈತನ ಸಂಗಡ ನಡೆದೇ ಹೋಗುತ್ತದೆ. ಆ ದಿನ ರಾತ್ರಿ ಗಂಡ-ಹೆಂಡತಿ ಶೃಂಗರಿಸಿದ ಕೋಣೆಯಲ್ಲಿ ಸೇರಿದಾಗ ಹೆಂಡತಿಯು ಆ ದಿನ ಮಂಗಳಗೌರಿ ಪೂಜೆ ಮಾಡಿ ಪ್ರಸಾದವನ್ನು ಸಂಕಲ್ಪ ಮಾಡಿದ್ದರಿಂದ ಆ ಪ್ರಕಾರ ಗಂಡನಿಗೆ ಪ್ರಸಾದವನ್ನು ತಿನಿಸುತ್ತಾಳಲ್ಲದೆ ನಂತರ ಆತನಿಗೆ ಮಂತ್ರಾಕ್ಷತೆ ತಲೆಯ ಮೇಲೆ ಹಾಕಿ ತಾನೂ ಸ್ವೀಕರಿಸುತ್ತಾಳೆ. ಪ್ರಸಾದ ತಿಂದು ಕೈ ತೊಳೆಯುವಾಗ ಕೈಯಲ್ಲಿಯ ಮುದ್ರೆ ಉಂಗುರ ಜಾರಿ ಬಟ್ಟಲಲ್ಲಿ ಬೀಳುತ್ತದೆ. ನಂತರ ರಾತ್ರಿ ಆದ್ದರಿಂದ ರಾಜಕುಮಾರನು ನಿದ್ರೆ ಹೋಗುತ್ತಾನೆ. ಈ ವೇಳೆಗೆ ಸರಿಯಾಗಿ ಆತನಿಗೆ ತಾನು ಪಡೆದು ಬಂದ 16 ವರ್ಷ ಆಯುಸ್ಸು ಮುಗಿಯುತ್ತದೆ. ಕೂಡಲೇ ಯಾವುದೋ ದಿಕ್ಕಿನಿಂದ ಒಂದು ಸರ್ಪವು ಆತನನ್ನು ಕಚ್ಚಲು ಬರುತ್ತದೆ. ತಲೆಯವರೆಗೆ ಸರ್ಪವು ಬಂದಾಗ, ರಾಜಕುಮಾರ ಮಲಗುವಾಗ ತನ್ನ ತಲೆಯ ಮೇಲಿರಿಸಿಕೊಂಡಿದ್ದ ಮಂತ್ರಾಕ್ಷತೆ ಸರ್ಪದ ಹೆಡೆಯ ಮೇಲೆ ಬೀಳುತ್ತವೆ. ತಕ್ಷಣ ಆ ಸರ್ಪವು ಮೃತ ಹೊಂದುತ್ತದೆ. ರಾಜಕುಮಾರಿಯು ಧೈರ್ಯಗುಂದದೆ ಸತ್ತ ಹಾವನ್ನು ೧ ಬಿಂದಿಗೆಯಲ್ಲಿ ಹಾಕಿ ಅದರ ಬಾಯಿಗೆ ಬಿಣವನ್ನು ಗಟ್ಟಿಯಾಗಿ ಬಿಗಿದು ಒಂದು ಮೂಲೆಯಲ್ಲಿ ಇಡುತ್ತಾಳೆ. ಬೆಳಗು ಮುಂಜಾನೆ ರಾಜಕುಮಾರನು ಎದ್ದು ಮೊದಲೇ ನಿರ್ಧರಿಸಿದಂತೆ ತನ್ನ ಸೋದರ ಮಾವನೊಡಗೂಡಿ ಗಂಗಾ ಸ್ನಾನಕ್ಕಾಗಿ ಪ್ರಯಾಣ ಬೆಳೆಸುತ್ತಾನೆ. ರಾತ್ರಿ ನಡೆದ ಘಟನೆ ಯಾವುದೂ ಆತನಿಗೆ ತಿಳಿಯದಂತೆ ಹೆಂಡತಿ ಆದವಳು ನೋಡಿಕೊಳ್ಳುತ್ತಾಳೆ. ಆ ನಂತರ ಮೊದಲೇ ಯೋಜಿಸಿದಂತೆ ಕುಷ್ಠರೋಗಿಯು ರಾಜಕುಮಾರಿಯನ್ನು ತನ್ನ ಜೊತೆ ಕರೆದೊಯ್ಯಲು ಬರುತ್ತಾನೆ. ರಾಜಕುಮಾರಿ ವಿರೋಧ ವ್ಯಕ್ತಪಡಿಸಲು ಈ ಕುಷ್ಠರೋಗಿಯು ನಿರುಪಾಯನಾಗಿ ವಾಪಸ ಹೋಗುತ್ತಾನೆ. ಇತ್ತ ಮದುವೆ ಆದ ರಾಜಕುಮಾರ ಕಾಶೀಕ್ಷೇತ್ರಕ್ಕೆ ಹೋದವನು ವಾಪಸ ಈ ರಾಜ್ಯದ

ಮೂಲಕವೇ ತನ್ನ ರಾಜ್ಯಕ್ಕೆ ಹೋಗುವಂತೆ ರಾಜಕುಮಾರಿಯು ಯೋಜನೆ ಮಾಡಿ ಗಂಗಾಸ್ನಾನ ಮಾಡಿಕೊಂಡು ತಮ್ಮ ತಮ್ಮ ಸ್ಥಳಗಳಿಗೆ ವಾಪಸ ಹೋಗುವ ಯಾತ್ರಿಕರು ಈ ಸ್ಥಳಕ್ಕೆ ಬಂದು ಆದರಾತಿಥ್ಯ ಸ್ವೀಕರಿಸಲೇಬೇಕೆಂದು ರಾಜಾಜ್ಞೆ ಹೊರಡಿಸುತ್ತಾಳೆ. ಗಂಗಾಸ್ನಾನ ಮಾಡಿಕೊಂಡು ಸ್ವಸ್ಥಾನಕ್ಕೆ ಹೋಗಲು ಈ ರಾಜಕುಮಾರ ಹಾಗೂ ಅವನ ಸೋದರಮಾವ ಇಬ್ಬರೂ ಈ ರಾಜಸ್ಥಾನಕ್ಕೆ ಬರುತ್ತಾರೆ. ಮೊದಲೇ ಗೊತ್ತುಪಡಿಸಿದಂತೆ ಯಾತ್ರಾರ್ಥಿಗಳಿಗೆಲ್ಲ ಫಾರಿ-ಭೋಜನ ಜೊತೆಗೆ ತಾಂಬೂಲವನ್ನು ಸ್ವತಃ ಮದುವೆ ಆದ ರಾಜಕುಮಾರಿಯೇ ಪ್ರತಿಯೊಬ್ಬರಿಗೆ ಕೊಡುತ್ತಾ ಬರುತ್ತಾಳೆ. ಹೀಗೆ ಆದರಾತಿಥ್ಯ ಮಾಡುವಾಗ ಮದುವೆ ಆದ ರಾಜಕುಮಾರನು ತಾಂಬೂಲ ಸ್ವೀಕರಿಸಲು ಆಕೆಯ ಹತ್ತಿರ ಬರುತ್ತಾನೆ. ಸರಿ, ತನ್ನ ಕೆಲಸವಾಯಿತೆಂದು ರಾಜಕುಮಾರಿಯು ಆತನ ಕೈ ಹಿಡಿದು ರಾಜದರ್ಬಾರಕ್ಕೆ ಬಂದು ತಂದೆ ರಾಜನಿಗೆ ಎಲ್ಲ ವಿಷಯ ತಿಳಿಸುತ್ತಾಳೆ. ರಾಜನು ಸಂತೋಷಭರಿತನಾಗಿ ಶಾಸ್ತ್ರೀಯ ರೀತಿಯಿಂದಲೇ ಮದುವೆ ನಡೆದದ್ದನ್ನು ಮನಗಂಡು ಮಗಳ ಅಳಿಯನಿಗೆ ತುಂಬಿದ ಸಭೆಯಲ್ಲಿವಿಶೇಷ ಸತ್ಕಾರ ಮಾಡುತ್ತಾನೆ. ಆಗ ರಾಜಕುಮಾರಿಯು ತನ್ನ ಮದುವೆ ನಡೆದ ರಾತ್ರಿ ನಡೆದ ಎಲ್ಲ ಘಟನೆಯನ್ನು ಬಹಿರಂಗ ಮಾಡಿ ರಾಜಮುದ್ರೆಯ ಉಂಗುರವನ್ನು ತೋರಿಸುತ್ತಾಳೆ. ಅಲ್ಲದೆ ಸತ್ತ ಸರ್ಪವನ್ನು ತುಂಬಿಟ್ಟ ಪಾತ್ರೆಯನ್ನು ತಂದು ಸಭೆಯಲ್ಲಿ ತೆರೆದು ನೋಡಿದಾಗ ಅದು ಬೆಲೆಯುಳ್ಳ ಮುತ್ತಿನ ಸರವಾಗಿ ರೂಪಾಂತರ ಹೊಂದಿದ್ದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟು ಆನಂದದಿಂದ ನವದಂಪತಿಗಳಿಗೆ ಎಲ್ಲ ಪ್ರಜೆಗಳು ಹರಿಸುತ್ತಾರೆ. ರಾಜ ದಂಪತಿಗಳೂ ಆನಂದ ಸಾಗರದಲ್ಲಿ ತೇಲಾಡುತ್ತಾರೆ.

ಮದುವೆ ಮುಹೂರ್ತಕ್ಕೆ ಸರಿಯಾಗಿ ಭಕ್ತಿಶ್ರದ್ಧೆಗಳಿಂದ ರಾಜಕುಮಾರಿಯು ನೆರವೇರಿಸಿದ ಮಂಗಳಗೌರಿ ಪೂಜೆಯು ಪರಿಣಾಮವೇ ಸುಖಾಂತ್ಯದಲ್ಲಿ ಕೊನೆಗೊಳ್ಳುತ್ತದೆ".

ಈ ಮೇಲಿನ ಇತಿಹಾಸದಿಂದ ಸುಮಂಗಲೆಯರು ಇಂದಿಗೂ ಮಂಗಳಗೌರಿ ಪೂಜೆಯನ್ನು ಶ್ರದ್ಧಾಭಕ್ತಿಯಿಂದ ಅವಶ್ಯವಾಗಿ ನೆರವೇರಿಸುತ್ತಿದ್ದಾರೆ.

**ಬುಧ ಬೃಹಸ್ಪತಿ ಪೂಜೆ :**

ಶ್ರಾವಣ ಮಾಸದಲ್ಲಿ ಬರುವ ಬುಧವಾರ-ಗುರುವಾರ ದಿನಗಳಂದು ಬುಧ ಬೃಹಸ್ಪತಿ ಚಿತ್ರಗಳನ್ನು ಸುಣ್ಣದಿಂದಾಗಲಿ ಕೆಮ್ಮಣ್ಣಿನಿಂದಾಗಲಿ ಬತ್ತಿಯಿಂದ ಗೋಡೆಯ ಮೇಲೆ ಬರೆದು (ಚಿತ್ರಗಳನ್ನು ತಮ್ಮ ಕಲ್ಪನೆಯಿಂದ ಬರೆಯಬೇಕು) ಅವುಗಳಿಗೆ (ಅರಿಷಿಣ-ಕುಂಕುಮ) ಗೆಜ್ಜೆವಸ್ತ್ರ ಏರಿಸಿ ಪೂಜಿಸಬೇಕು. ಇದಕ್ಕೆ ಒಂದು ಇತಿಹಾಸ ಹೀಗಿದೆ

"ಶ್ರಾವಣ ಮಾಸದಲ್ಲಿ ಒಮ್ಮೆ ಬುಧ-ಬೃಹಸ್ಪತಿ ಗ್ರಹಗಳು ಬಡ್ಡ ಭಕ್ತರ ಮನೆಗೆ ಬಂದು ತಮಗೆ ಹಸಿವೆ ಆಗಿದೆಯೆಂದೂ ಹೊಟ್ಟೆಗೆ ಏನಾದರೂ ಕೊಡಬೇಕೆಂದು ಬೇಡಿದರು.

ಬಡವರಾದರೂ ಅತಿಥಿ ಸತ್ಕಾರ ಧರ್ಮವೆಂದು ತಿಳಿದು ಮನೆಯಲ್ಲಿ ಇದ್ದುದನ್ನು ಅತಿಥಿಗಳಿಗೆ ಉಣಬಡಿಸಿ ಅವರನ್ನು ತೃಪ್ತಿಪಡಿಸಿದರು. ತೃಪ್ತಿ ಹೊಂದಿದ ಗ್ರಹಗಳಿಬ್ಬರೂ ಆ ಭಕ್ತನಿಗೆ ಸಕಲ ಸಂಪತ್ತು ದೊರಕುವಂತೆ ಆಶೀರ್ವದಿಸಿ ಅದೃಶ್ಯರಾದರು. ಅತಿಥಿ ಸತ್ಕಾರವನ್ನು ನಡೆಯಿಸಿದ ಆ ಭಕ್ತರು ಆ ಗ್ರಹಗಳ ಕೃಪೆಯಿಂದ ಐಶ್ವರ್ಯವಂತರಾಗಿ ಧನ್ಯರಾದರು".

ಬುಧ-ಬೃಹಸ್ಪತಿ ಪೂಜೆಗೆ ಈ ಘಟನೆ ಮುಖ್ಯ ಕಾರಣವಾಗಿದೆ.

**ಸಂಪತ್ತು ಶುಕ್ರವಾರ :**

ಶ್ರಾವಣ ಮಾಸದಲ್ಲಿ ಬರುವ ಶುಕ್ರವಾರ ಗೌರಿ ಪೂಜೆ ಮಾಡಬೇಕು. ಒಂದೊಂದು ಸಲ ಶ್ರಾವಣ ಮಾಸದಲ್ಲಿ ಐದು ಶುಕ್ರವಾರಗಳು ಬರುವದುಂಟು. ಹಾಗಿದ್ದಲ್ಲಿ ಐದೂ ಶುಕ್ರವಾರ ಪೂಜೆ ಮಾಡಬೇಕು. ಮಣ್ಣಿನ ಗಡಿಗೆ (ತಂಬಿಗೆ ಆಕಾರದ್ದು) ಇಲ್ಲವೆ ತಾಮ್ರದ ತಂಬಿಗೆ ಅಥವಾ ಬೆಳ್ಳಿ ತಂಬಿಗೆ ಇವುಗಳಲ್ಲಿ ಯಾವುದಾದರೂ ಸರಿ. ತಂಬಿಗೆ ಹೊರಭಾಗದಲ್ಲಿ ಸರಿಯಾಗಿ ಐದು ಭಾಗ ಮಾಡಿ ಕೆಂಪುಬಣ್ಣದಿಂದ (ಮಣ್ಣಿನ ಗಡಿಗೆಯಾದಲ್ಲಿ ಬಿಳಿಯ ಬಣ್ಣದಿಂದ) ಮಧ್ಯಭಾಗದಲ್ಲಿ ಮಂಗಳಸೂತ್ರ ಬರೆದು ಕೆಳಗಡೆ ಲಕ್ಷ್ಮೀ-ನಾರಾಯಣ ಮೂರ್ತಿಗಳನ್ನು ಬಣ್ಣದಿಂದ ಬರೆಯಬೇಕು. ಉಳಿದ ನಾಲ್ಕು ಭಾಗಗಳಲ್ಲಿ ಕ್ರಮವಾಗಿ ಆನೆ, ಆಕಳು, ಚಕ್ರ-ಶಂಖ, ಗದ-ಪದ್ಮ ಚಿತ್ರಗಳನ್ನು ಬರೆಯಬೇಕು. ನಂತರ ಹೀಗೆ ಚಿತ್ರ ಬಿಡಿಸಿದ ಮೇಲೆ ತಂಬಿಗೆ ಒಳಗೆ ಅಕ್ಕಿ, ಅಕ್ಕಿಯ ೫ ಸಣ್ಣ ಲೋಟಾದಿಂದ ಐದು ಹಾಕಬೇಕು. ಅರಿಷಿಣ, ಕುಂಕುಮ, ಕರಿಯಮಣಿ, ಅಡಿಕೆಬೆಟ್ಟ, ಅರಿಷಿಣ ಬೇರು, ಚಿಕ್ಕ ಬೆಳ್ಳಿಯ ಹಣಿಗೆ, ಸುತ್ತಗಾಲ ಉಂಗುರ, ಬಳೆ, ಜಿಲ್ಲೆ, ಕನ್ನಡಿ ಇಷ್ಟನ್ನೂ ಹಾಕಿ ಮೇಲೆ ಮುಚ್ಚಳ ಮುಚ್ಚಬೇಕು. ಈ ಮುಚ್ಚಳಕ್ಕೂ ಬಣ್ಣದಿಂದ ಗೌರಿ ಮುಖ ಬರೆಯಬೇಕು. ನಂತರ ಹೀಗೆ ತಯಾರಿಸಿದ ತಂಬಿಗೆ ಗೌರಿಯ ಪ್ರತೀಕವೆಂದು ಭಾವಿಸಿ, ತಂಬಿಗೆಗೆ ಮಂಗಳ ಸೂತ್ರ ಕಟ್ಟಿ ಸುಂದರವಾದ ಮಂಟಪದಲ್ಲಿ ಅಕ್ಕಿ ಹಾಕಿ ಅದರಲ್ಲಿ ಪದ್ಮ ಬರೆದು ಶೃಂಗರಿಸಿದ ತಂಬಿಗೆ (ಗೌರಿ)ಯನ್ನು ಸಂಕಲ್ಪ ಮಾಡಿ ಸ್ಥಾಪನೆ ಮಾಡಬೇಕು. ನಂತರ ಮೀಸಲು ನೀರನ್ನು ತಂಬಿಗೆಗೆ ಪ್ರೋಕ್ಷಣೆ ಮಾಡಿ ಗೆಜ್ಜೆವಸ್ತ್ರ, ಅರಿಷಿಣ, ಕುಂಕುಮ, ತರತರಹದ ವಾಸನೆ ಹೂ, ಕೇದಿಗೆ ಏರಿಸಿ, ಪೂರಣ ಆರತಿ ಮಾಡಬೇಕು. ಅನಂತರ ಗೌರಿಗೆ ಉಡಿ ತುಂಬಬೇಕು. ಹೀಗೆ ಶ್ರಾವಣ ಮಾಸ ಪೂರ್ಣ ಪ್ರತಿ ಶುಕ್ರವಾರ ಗೌರಿ ಶ್ರದ್ಧೆಯಿಂದ ಗೌರಿ ಪೂಜೆ ಮಾಡಬೇಕು. (ಇವಳು ಶ್ರೀದೇವಿ)

ಈ ಗೌರಿ ಪೂಜೆಗೆ ಹಿನ್ನೆಲೆ :

"ಹಿಂದಕ್ಕೆ ಒಬ್ಬ ಬ್ರಾಹ್ಮಣ ನಿತ್ಯ ಗೋಪಾಳ ಬೇಡಿಕೊಂಡು ಉಪಜೀವನ ಮಾಡುತ್ತಿದ್ದನು. ಹೀಗೆ ಜೀವನ ನಡೆಯಿಸಿಕೊಂಡು ಬರುವಾಗ ಒಂದು ಶುಕ್ರವಾರ ಬಿಳ್ಳರ

ಮನೆಯಲ್ಲಿ ಗೌರಿ ಪೂಜೆ ನಿಮಿತ್ತ ಗೌರಿ ಗಡಿಗೆಗೆ ಚಿತ್ರ ಬರೆದು ಅಲಂಕಾರ ಮಾಡುತ್ತಿರುವುದನ್ನು ಕಂಡು ಕುತೂಹಲದಿಂದ ಅವರ ಬಗ್ಗೆ ವಿಚಾರಿಸಲಾಗಿ ಗೌರಿ ಪೂಜೆಯ ಮಹತ್ವವನ್ನೂ ಅವರ ಬಾಯಿಯಿಂದ ತಿಳಿದು ತಾನೂ ತಮ್ಮ ಮನೆಯಲ್ಲಿ ಗೌರಿ ಪೂಜೆ ಮಾಡಬೇಕೆಂದು ಆಶೆ ವ್ಯಕ್ತ ಮಾಡಿದನು. ಕೂಡಲೇ ಆ ಬ್ರಾಹ್ಮಣನಿಗೆ ಅವರು ಒಂದು ಅಲಂಕರಿಸಿದ ಗಡಿಗೆಯನ್ನು ದಾನವಾಗಿ ಕೊಟ್ಟರು. ಅದನ್ನು ತೆಗೆದುಕೊಂಡು ಮುಂದಿನ ಮನೆಗೆ ಹೋದಾಗ ಅವರು ಅವನ ಹತ್ತಿರ ಇದ್ದ ಶೃಂಗರಿಸಿದ ಗೌರಿ ಗಡಿಗೆಯನ್ನು ನೋಡಿ ಅವನಿಗೆ ಗೌರಿಪೂಜೆ ಮಾಡಲು ಬೇಕಾದ ಎಲ್ಲ ಸಾಮಗ್ರಿಗಳನ್ನು ಕೊಡುತ್ತಾರೆ. ಹೀಗೆ ಸಂಗ್ರಹಿಸಿದ ಗೌರಿ ಗಡಿಗೆ ಧನ-ಧಾನ್ಯ ಎಲ್ಲವನ್ನೂ ಮನೆಗೆ ತಂದು ತನ್ನ ಧರ್ಮಪತ್ನಿಗೆ ಕೊಟ್ಟು ಅಂದೇ ಗೌರೀ ಪೂಜೆಯನ್ನು ವಿಜೃಂಭಣೆಯಿಂದ ನೆರವೇರಿಸುತ್ತಾನೆ. ಅದರಂತೆ ಶ್ರಾವಣ ಮಾಸದ ಉಳಿದ ಶುಕ್ರವಾರಗಳಲ್ಲಿಯೂ ಬ್ರಾಹ್ಮಣ ದಂಪತಿಗಳು ಬಹು ಶ್ರದ್ಧೆಯಿಂದ ಗೌರೀ ಪೂಜೆಯನ್ನು ಮಾಡುತ್ತಾರೆ. ಇವರ ಅನನ್ಯ ಭಕ್ತಿಗೆ ಮೆಚ್ಚಿ ಕೊನೆಯ ಶುಕ್ರವಾರ ಪೂಜೆ ನಡೆದಾಗ ಲಕ್ಷ್ಮೀದೇವಿಯು ಪ್ರತ್ಯಕ್ಷಳಾಗಿ ಆ ದಂಪತ್ತುಗಳಿಗೆ ಸಕಲ ಸೌಭಾಗ್ಯವನ್ನು ದಯಪಾಲಿಸಿ ಪರಮಾತ್ಮನಲ್ಲಿ ವಿಶೇಷ ಭಕ್ತಿ ಹುಟ್ಟುವಂತೆ ಆಶೀರ್ವದಿಸಿ ಅದೃಶ್ಯಳಾಗುತ್ತಾಳೆ.

ಹೀಗೆ ಶ್ರಾವಣ ಮಾಸದ ಗೌರಿ ಪೂಜೆಗೆ ವಿಶೇಷ ಮಹತ್ವವಿರುವುದರಿಂದ ಸುಮಂಗಲೆಯರು ಇಂದಿಗೂ ಶ್ರಾವಣ ಮಾಸದಲ್ಲಿ ಪ್ರತಿ ಶುಕ್ರವಾರ ಗೌರಿ ಪೂಜೆಯನ್ನು ನೆರವೇರಿಸುತ್ತಿದ್ದಾರೆ. (ಹೋಳಿಗೆ, ಕಡಬು, ಶೇವಿಗೆ ಪಾಯಸ ನೈವಿದ್ಯಕ್ಕೆ ಮಾಡಬೇಕು.)

**ವರಮಹಾಲಕ್ಷ್ಮೀವ್ರತ :**

ಶ್ರಾವಣ ಮಾಸದಲ್ಲಿ ಮೇಲೆ ಹೇಳಿದಂತೆ ಎಲ್ಲ ಶುಕ್ರವಾರದಂದು ಗೌರೀ ಪೂಜೆ ಮಾಡುವದನ್ನು ಮಾಡುವದಲ್ಲದೆ ಎರಡನೆಯ ಶುಕ್ರವಾರ ಮಾಡುವ ಪೂಜೆಯೇ 'ವರಮಹಾಲಕ್ಷ್ಮೀ' ಪೂಜೆ ಎನಿಸಿಕೊಳ್ಳುತ್ತದೆ. ಆ ದಿನ ಬೇರೆಯಾಗಿ ಬೆಳ್ಳಿಯ ಬಿಂದಿಗೆ ಅಥವಾ ಮಣ್ಣಿನ ಬಿಂದಿಗೆ (ಸಣ್ಣಕೊಡ) ತೆಗೆದುಕೊಂಡು ಹಿಂದೆ ಹೇಳಿದಂತೆ ಗೌರಿ (ಲಕ್ಷ್ಮೀ) ಮೂರ್ತಿಯನ್ನು ಬರೆದು ಬಿಂದಿಗೆಯ ಬಾಯಿಗೆ ಸರಿಯಾಗಿ ಒಂದು ತೆಂಗಿನಕಾಯಿ ಇರಿಸಿ ಲಕ್ಷ್ಮಿಯ ಬೆಳ್ಳಿಯ ಮುಖವಾಡ ಇದ್ದರೆ ಕಾಯಿ ಮುಚ್ಚುವ ಹಾಗೆ ಜೋಡಿಸಬೇಕು. ಬೆಳ್ಳಿಯ ಮುಖವಾಡ ಇರದೆ ಇದ್ದಲ್ಲಿ ಮೇಣದಿಂದ ಕಾಯಿಗೆ ಕಣ್ಣು, ಮೂಗು, ಬಾಯಿ, ಕಿವಿ, ತಲೆಯ ಮೇಲೆ ಕೂದಲನ್ನು ಬಿಡಿಸಬೇಕು. ನೋಡಲು ಸುಂದರ ಮುಖ ಕಾಣುವಂತೆ ಮಾಡಬೇಕು. ಅರಿಷಿಣ, ಕುಂಕುಮ ಹಚ್ಚಿ ಆಭರಣ (ಗಾಡೆ-ಬುಗುಡೆ ಸಹಿತ)ಗಳನ್ನು ಸಹಿತ ಹಾಕಬೇಕು. ಶುಕ್ರವಾರ ಗೌರಿಯ ತಂಬಿಗೆಯಲ್ಲಿ ಹಾಕಿದ ಎಲ್ಲ ಸಾಮಾನುಗಳನ್ನು ಈ ಶೃಂಗರಿಸಿದ ಬಿಂದಿಗೆಯಲ್ಲಿ ಹಾಕಬೇಕು. ದೇವರ ಮನೆಯಲ್ಲಿ ಯೋಗ್ಯಸ್ಥಳದಲ್ಲಿ ಆಕಳ ಶಗಣಿಯಿಂದ ಸಾರಿಸಿ ರಂಗವಲ್ಲಿ ಬರೆದು ಸುಂದರವಾದ

ಮಂಟಪದಲ್ಲಿ ಮಧ್ಯ ಅಕ್ಕಿ ಹಾಕಿ ಹೀಗೆ ತಯಾರಿಸಿದ ಗೌರಿಯನ್ನು ಸ್ಥಾಪಿಸಬೇಕು. ಗೌರಿಗೆ ಕೊರಳಲ್ಲಿ ಮಂಗಳಸೂತ್ರ ಕಟ್ಟಬೇಕು. 16 ಎಳೆ ಗೆಜ್ಜೆವಸ್ತ್ರ, 16 ಎಳೆ ದಾರವನ್ನು ಏರಿಸಬೇಕು. (ನಂತರ ಈ 16 ಎಳೆ ದಾರವನ್ನು ಪೂಜೆ ಮಾಡುವವರು ಕೊರಳಲ್ಲಿ ಹಾಕಿಕೊಳ್ಳಬೇಕು). ಅಲ್ಲದೇ ನಾನಾ ತರಹದ ಹೂ, ಕೇದಿಗೆಗಳನ್ನು ಏರಿಸಬೇಕು. ಬಾಳೆಕಂಬ, ಮಾವಿನ ತೋಳಲು ಮಂಟಪಕ್ಕೆ ಕಟ್ಟಬೇಕು. ಪುರೋಹಿತರನ್ನು ಕರೆದು ಅವರ ಮಾರ್ಗದರ್ಶನದಲ್ಲಿ ಮಹಾಲಕ್ಷ್ಮೀ ಆವ್ಹಾನ ಮಾಡಿ ಶ್ರದ್ಧೆಯಿಂದ ಪೂಜೆ ಮಾಡಬೇಕು. 16 ಹೂರಣದ ಆರತಿ ಮಾಡಬೇಕು. ದೇವರ ಪೂಜೆ ನೈವೇದ್ಯ ಆದ ನಂತರ ಲಕ್ಷ್ಮೀ ದೇವಿಗೆ ಆರತಿ ಮಾಡಿ ದಂಪತ್ತು ಭೋಜನ ಮಾಡಿಸಬೇಕು. ಮುತ್ತೈದೆಗೆ ಮರದ ಬಾಗಿಣ ಕೊಡಬೇಕು. (ಮರದ ಬಾಗಿಣದಲ್ಲಿ ಅಕ್ಕಿ, ಕಡ್ಲಿಬೇಳೆ, ತೊಗರಿ ಬೇಳೆ, ಉದ್ದಿನಬೇಳೆ, ಬೆಲ್ಲ, ಟೆಂಗಿನಕಾಯಿ, ಅರಿಷಿಣ-ಕುಂಕುಮ, ಮಂಗಳಸೂತ್ರ, ಕಾಲುಂಗುರ, ಪಿಳ್ಳೆ, ಕನ್ನಡಿ, ಬಳೆ, ಹಣ್ಣು, ಎಲೆ-ಅಡಿಕೆ, ದಕ್ಷಿಣೆ ಇಡಬೇಕು). ಮರದ ಬಾಗಿಣವನ್ನು ಕೊಡುವಾಗ ಒಂದು ಮರದಲ್ಲಿ ಈ ಮೇಲೆ ಹೇಳಿದ ಪದಾರ್ಥಗಳನ್ನೆಲ್ಲ ಇರಿಸಿ ಅದರ ಮೇಲೆ ಇನ್ನೊಂದು ಮರವನ್ನು ಮುಚ್ಚಿ, ಮೇಲ್ಭಾಗದಲ್ಲಿ ಕೆಂಪುಬಣ್ಣದಿಂದ ಕತ್ತರಿ (X) ಗುರುತು ಹಾಕಬೇಕು. ಹೀಗೆ ತಯಾರಿಸಿದ ಮರಗಳನ್ನು ರಂಗವಲ್ಲಿ ಹಾಕಿ ಅದರ ಮೇಲೆ ಇಡಬೇಕು. ಸಂಕಲ್ಪ ಮಾಡಿದಂತೆ ಮುತ್ತೈದೆಯನ್ನು ಕರೆದು ಇದಿರುಬದಿರು ಕೂತು ಮಧ್ಯ ಇರಿಸಿದ ಮರದ ಬಾಗಿಣವನ್ನು ಸೀರೆ ಸೆರಗಿನಿಂದ ಹಿಡಿದು ಒಮ್ಮೆ ಮೇಲಿನ ಮರವನ್ನು ತೆರೆದು ಒಳಗಿನ ಪದಾರ್ಥಗಳನ್ನು ನೋಡಿ ಮತ್ತೆ ಮೊದಲಿನಂತೆ ಮರದ ಮೇಲೆ ಮರವನ್ನು ಮುಚ್ಚಿ ಮುತ್ತೈದೆಗೆ ದಾನ ಮಾಡಬೇಕು. ಹೀಗೆ ದಾನ ಕೊಡುವಾಗ –

**"ರಾಮಪತ್ನಿ ಮಹಾಭಾಗಿ ಪುಣ್ಯಮೂರ್ತಿ ನಿರಾಮುಖಿ ಮಯಾದತ್ತಾಣಿ ಸೂರ್ಪಾಣಿ ಗೃಹಾಣಿ ಮಾನಿ ಜಾನಕಿ"** ಅಂತಾ ಹೇಳಬೇಕು.

ಹೀಗೆ ಶ್ರದ್ಧಾಪೂರ್ವಕ ಕೊಟ್ಟ ಮರದ ಬಾಗೀಣದಿಂದ ಬ್ರಹ್ಮಾಂಡ ದಾನ ಮಾಡಿದ ಪುಣ್ಯ ಲಭಿಸುವದೆಂದು ಹೇಳಿದೆ.

ಈ ವರಮಹಾಲಕ್ಷ್ಮೀ ಪೂಜೆಯನ್ನು ಆದಷ್ಟು ಸಾಯಂಕಾಲದ ವೇಳೆಯಲ್ಲಿ ಆಚರಿಸಿದರೆ ವಿಶೇಷ ಫಲ ಉಂಟು. ಇದು ಅಸಾಧ್ಯವೆನಿಸಿದಲ್ಲಿ ಮಧ್ಯಾಹ್ನವೇ ಪೂಜೆ ಮಾಡಬಹುದು. ಹೀಗೆ ಭಕ್ತಿಯಿಂದ ವರಮಹಾಲಕ್ಷ್ಮೀ ಪೂಜೆ ಮಾಡಿ ಬ್ರಾಹ್ಮಣ ಸುವಾಸಿನಿಯರ ಊಟವಾದ ಮೇಲೆ ಬಂಧು-ಬಳಗದವರನ್ನು ಕೂಡಿಕೊಂಡು ತಾನೂ ತೀರ್ಥಪ್ರಸಾದ ಸೇವಿಸಬೇಕು. ಸಾಯಂಕಾಲದಲ್ಲಿ ದಾಸರು ರಚಿಸಿದ ವರಮಹಾಲಕ್ಷ್ಮೀ ಹಾಡುಗಳನ್ನು ಹೇಳಬೇಕು. (ಕರಿಗಡಬು, ಕರಜಿಕಾಯಿ, ಚಕ್ಕಲಿ, ಚಿರೋಟಿ, ಶೇವಿಗೆ ಪಾಯಸ, ಚಿತ್ರಾನ್ನ, ಬುತ್ತಿ ಮುಂತಾದ ಅಡಿಗೆ ಮಾಡಿ ನೈವೇದ್ಯ ಮಾಡಬೇಕು.)

ಈ ಪೂಜೆಯ ಮಹತ್ವವನ್ನು ತಿಳಿಸುವ ಕಥೆ ಹೀಗಿದೆ —

ಪಾರ್ವತಿಯು ತನ್ನ ಪತಿಯನ್ನು ಕುರಿತು ಸಾಧ್ವಿಯಾದವಳು ಭೂಲೋಕದಲ್ಲಿ ಸರ್ವ ಸೌಭಾಗ್ಯ ಹೊಂದಲು ಯಾವ ವ್ರತವನ್ನು ಮಾಡಬೇಕೆಂದು ಪ್ರಶ್ನೆ ಮಾಡಲು ಪರಮೇಶ್ವರನು ಹೇಳಿದ್ದು -

"ಕುಂಡಿನ ಪುರದಲ್ಲಿ ಒಬ್ಬ ಬ್ರಾಹ್ಮಣ ಹೆಂಡತಿ ಚಾರುಮತಿ ಎನ್ನುವವಳು. ಒಂದು ಸಲ ತನ್ನ ಕನಸಿನಲ್ಲಿ ವರಮಹಾಲಕ್ಷ್ಮಿಯನ್ನು ಕಾಣುತ್ತಾಳೆ. ಆಗ ತನಗೆ ಸಕಲ ಸೌಭಾಗ್ಯ ಪ್ರಾಪ್ತವಾಗುವ ಬಗ್ಗೆ ಹೇಗಾಗುವದೆಂದು ಪ್ರಾರ್ಥಿಸಿಕೊಂಡಾಗ ಮಹಾಲಕ್ಷ್ಮಿಯು ತನ್ನ ಪೂಜೆಯಿಂದ ಶ್ರದ್ಧೆ-ಭಕ್ತಿಯಿಂದ ಆಯುಷ್ಯಪರ್ಯಂತ ಆಚರಿಸಿದಲ್ಲಿ ಆಕೆಯ ಇಚ್ಛೆಪೂರ್ತಿಯಾಗುವದೆಂದು ಹೇಳಿ ಅದೃಶ್ಯಳಾಗುತ್ತಾಳೆ. ಕನಸಿನಲ್ಲಿ ಹೇಳಿದಂತೆ ಆ ಸಾಧ್ವಿಮಣಿಯು ಬಹು ಭಕ್ತಿಯಿಂದ ವರಮಹಾಲಕ್ಷ್ಮೀ ವ್ರತವನ್ನು ಆಚರಿಸಿ ಸಕಲ ಸಂಪತ್ತು ಸೌಭಾಗ್ಯವನ್ನು ಹೊಂದಿ ಕಡೆಗೆ ಸದ್ಗತಿಯನ್ನು ಹೊಂದುತ್ತಾಳೆ".

ಹೀಗೆ ವರಮಹಾಲಕ್ಷ್ಮೀ ಪೂಜೆಯನ್ನು ಭೂಲೋಕದಲ್ಲಿ ಸಕಲ ಸಜ್ಜನರು ಆಚರಿಸಿ ಕೃತರಾಗುವದರಲ್ಲಿ ಸಂಶಯವಿಲ್ಲ. ಅದರಂತೆ ಶ್ರಾವಣಮಾಸದಲ್ಲಿ ಬರುವ ಪ್ರತಿ ಶನಿವಾರದಂದೂ ಲಕ್ಷ್ಮೀ ಪೂಜೆಯನ್ನು ಮಾಡಿ ಆ ದಿನ ನೈವೇದ್ಯಕ್ಕೆ ಜೋಳದ ನುಚ್ಚು, ಪುಂಡಿಪಲ್ಲೆ ಮಾಡುವದನ್ನು ನಾವು ಕಾಣುತ್ತೇವೆ.

**ನಾಗರ ಚವತಿ :**

ನಾಗರ ಚವತಿ ಹಾಗೂ ಪಂಚಮಿ ಹಬ್ಬ, ಇಡೀ ನಾಡಿಗೇ ಹಬ್ಬದ ದಿನವಾಗಿದೆ. ಶ್ರಾವಣ ಶುಕ್ಲಪಕ್ಷದಲ್ಲಿ ಬರುವ ಚವತಿ ದಿವಸ ಹೆಣ್ಣುಮಕ್ಕಳು ಸ್ನಾನ ಮಾಡಿಕೊಂಡು ಹೊಸ ಸೀರೆ ಕುಪ್ಪಸ ತೊಟ್ಟುಕೊಂಡು ಸೌಭಾಗ್ಯದ ಚಿನ್ಹಗಳನ್ನು ಧರಿಸಿಕೊಂಡು ಕಲ್ಲು ನಾಗಪ್ಪನಿಗೆ ಹಾಲು ಅಭಿಷೇಕ ಮಾಡಿ ಅರಿಷಿಣ ಹಚ್ಚಿದ ಗೆಜ್ಜೆವಸ್ತ್ರ, ಅರಿಷಿಣ-ಕುಂಕುಮ, ಜೋಳದ ಅರಳು, ಹುಣಸೇಕಾಯಿ, ನೆನೆದ ಕಡ್ಲಿ, ಹುರಿದ ಕಡ್ಲಿ, ಉಪ್ಪು, ಒಣಕೊಬ್ಬರಿ ಚೂರು, ಹೂ-ಕೇದಿಗೆ, ಕರಿಕೆ-ಪತ್ರಿ, ಏರಿಸಬೇಕು.

ತಂಬಿಟ್ಟು, ಜೋಳದರಳಿನ ಉಂಡೆ, ಎಳ್ಳುಂಡೆ, ಮುಂತಾದ ಉಂಡೆಗಳನ್ನು ಮಾಡಿ ನಾಗಪ್ಪನಿಗೆ ನೈವೇದ್ಯ ಮಾಡಬೇಕು. ಈ ಸಮಯದಲ್ಲಿ ಹೆಣ್ಣು ಮಕ್ಕಳು ತವರು ಮನೆಗೆ ಬಂದು ನಾಗಪ್ಪನ ಪೂಜೆಯಲ್ಲಿ ಭಾಗವಹಿಸುವದು ವಿಶೇಷ.

ಈ ನಾಗಪ್ಪನ ಪೂಜೆಗೆ ಹಿನ್ನೆಲೆ —

"ನಾಗರ ಚವತಿ ದಿವಸ ನಾಗಪ್ಪನ ಪೂಜೆಗೆ ಅವಶ್ಯವಾಗಿ ಬೇಕಾದ ಕೇದಿಗೆ ತರಲು ಮನೆಯಲ್ಲಿ ಗಂಡುಮಗ ಕೇದಿಗೆ ವನಕ್ಕೆ ಹೋಗುತ್ತಾನೆ. ಈ ಕೇದಿಗೆಯ ಸುವಾಸನೆಗೆ ಹಾವುಗಳು ಅಲ್ಲಿಯೇ ಸುತ್ತಾಡುತ್ತಿರುತ್ತವೆ. ಇದರ ಕಲ್ಪನೆ ಇಲ್ಲದೆ ಕೇದಿಗೆಯನ್ನು

ಕಿತ್ತುವಾಗ ಅದರಡಿಯಲ್ಲಿದ್ದ ಹಾವು ಈತನನ್ನು ಕಚ್ಚುತ್ತದೆ. ಎಷ್ಟೋ ಹೊತ್ತು ಕಳೆದರೂ ಕೇದಿಗೆ ತರಲು ವಾಪಸು ಮನೆಗೆ ಬರದಾಗಲು ಅವನ ತಂಗಿ ಚಿಂತಾಕ್ರಾಂತಳಾಗಿ ಅಣ್ಣನನ್ನು ಹುಡುಕಲು ಕೇದಿಗೆ ಬನಕ್ಕೆ ಬರುತ್ತಾಳೆ. ಆದರೆ ಅಣ್ಣನು ಹಾವು ಕಚ್ಚಿದ್ದರಿಂದ ಬಾಯಲ್ಲಿ ಬುರುಗು ಬಂದು ಎಚ್ಚರ ತಪ್ಪಿ ವನದಲ್ಲಿ ಬಿದ್ದಿದ್ದನ್ನು ನೋಡಿ ದುಃಖದಿಂದ ರೋದಿಸುತ್ತಾ ಅಣ್ಣನ ಹತ್ತಿರವೇ ಕೂಡುತ್ತಾಳೆ. ಹೀಗಾಗಿ ಆ ದಿನ ನಾಗಪೂಜೆಯನ್ನು ಅಣ್ಣ ಮನೆಗೆ ಬರದೇ ಮಾಡುವದಿಲ್ಲವೆಂದು ಸಂಕಲ್ಪ ಮಾಡಿ ದೇವರಲ್ಲಿ ಪ್ರಾರ್ಥನೆ ಸಲ್ಲಿಸುತ್ತಾಳೆ. ಇವಳು ಅಣ್ಣನಲ್ಲಿ ಇಟ್ಟಿರುವ ಅಸಾಧಾರಣ ಪ್ರೀತಿಯನ್ನು ಕಂಡು ನಾಗದೇವತೆ ಪ್ರತ್ಯಕ್ಷನಾಗಿ ಆಕೆಯ ಇಚ್ಛೆಯಂತೆ ಅಣ್ಣನಿಗೆ ಜೀವದಾನ ಮಾಡಿ ಅದೃಶ್ಯನಾಗುತ್ತಾನೆ. ನಂತರ ಅಣ್ಣನನ್ನು ಕೇದಿಗೆ ಸಹಿತ ಮನೆಗೆ ಕರತಂದು ನಾಗಪ್ಪನಿಗೆ ವಿಶೇಷ ಪೂಜೆಯನ್ನು ಸಲ್ಲಿಸಿ ಕೃತಕೃತ್ಯಳಾಗುತ್ತಾಳೆ".

ಈ ಘಟನೆಯು ಸ್ತ್ರೀ ಸಮುದಾಯಕ್ಕೇನೇ ನಾಗಪೂಜೆಯನ್ನು ಚವತಿ ದಿವಸವೇ ಮಾಡಲು ಕಾರಣವಾಗಿರಲು ಸಾಕು. ನಾಗಪ್ಪನಿಗೆ ಕೃತಜ್ಞತೆಯನ್ನು ಅರ್ಪಿಸಲು ಆ ದಿನ ಹೆಣ್ಣುಮಕ್ಕಳು ಊಟ ಮಾಡದೇ ಪೂಜೆಮಾಡಿ ಕೇವಲ ಫಲಹಾರ ಸ್ವೀಕರಿಸುವರು. ಮರುದಿವಸ,

**ನಾಗರಪಂಚಮಿ :**

ಆ ದಿನ ಮಣ್ಣಿನಿಂದ ನಾಗಪ್ಪನನ್ನು ತಯಾರಿಸಿ ಹೆಂಗಸರು 9 ಎಳೆ ದಾರವನ್ನು ನಾಗಪ್ಪನಿಗೆ ಏರಿಸಿ ತಾವು ಕೊರಳಲ್ಲಿ ಹಾಕಿಕೊಂಡರೆ, ಗಂಡಸರೂ ಈ ನಾಗಪ್ಪನಿಗೆ ಪೂಜೆ ಮಾಡಿ ಹಾಲು ಹೊಯ್ದು ಹುಣಸೇಕಾಯಿ, ಅರಳು ಏರಿಸಿ, ಅಡಿಗೆಯಲ್ಲಿ ಕುಚ್ಚಿದ ಕಡಬು ಮಾಡಿಸಿ ನೈವೇದ್ಯ ಮಾಡಿ, ಎಲ್ಲರೂ ಊಟ ಮಾಡುವರು. ಹೀಗೆ ನಾಗಪ್ಪನಿಗೆ ಹುಣಸೇ ಕಾಯಿ, ಅರಳು ಏರಿಸಿ ಹಾಲು ಹೊಯ್ದರೆ ಹುರುಕು ಕಚ್ಚಿ ಆಗುವದಿಲ್ಲವೆಂದೂ ಸಂಪ್ರದಾಯವಿದೆ.

**ಶಿರಾಳನ ಪೂಜೆ :**

ನಾಗರ ಪಂಚಮಿ ಮರುದಿನ ಶಿರಾಳ ಪೂಜೆ. ಇದಕ್ಕೆ ಹಿನ್ನೆಲೆ : (ಹಾಡು) ಹಿಂದಕ್ಕೆ ಒಂದು ಕುಟುಂಬದ ಮುಖ್ಯಸ್ಥನು ತನ್ನ ಊರಲ್ಲಿ ಒಂದು ದೊಡ್ಡ ಕೆರೆ ಕಟ್ಟಿಸುತ್ತಾನೆ. ಆದರೆ ಕೆರೆಗೆ ನೀರೇ ಬರುವದಿಲ್ಲ. ಬಲ್ಲವರನ್ನು ವಿಚಾರಿಸುತ್ತಾನೆ. ಒಬ್ಬ ಪಂಡಿತನು ಒಂದು ಜೀವವನ್ನು ಬಲಿ ಕೊಟ್ಟಲ್ಲಿ ಕೆಳಗೆ ನೀರು ಬರುತ್ತದೆಂದು ಅವನನ್ನು ನಂಬಿಸುತ್ತಾನೆ. ಈಗ ಬಲಿ ಯಾರನ್ನು ಕೊಡುವದೆಂದು ಚಿಂತಿಸುತ್ತಾನೆ. ತನ್ನ ಮನೆಯಲ್ಲಿ ತಾನು ತನ್ನ ಮಗ, ಸೊಸೆ, ಮೊಮ್ಮಕ್ಕಳು ಹೀಗೆ ಇರುತ್ತಾರೆ. ಬಹಳ ವಿಚಾರಿಸಿ ತನ್ನ ಮೊಮ್ಮಗನನ್ನು ಆಹುತಿ ಕೊಡುವದನ್ನು ನಿಶ್ಚಯಿಸಿ ಸೊಸೆಯನ್ನು ಅವಳ ತವರು ಮನೆಗೆ ಕಳಿಸುತ್ತಾನೆ. ಇತ್ತ ಮೊಮ್ಮಗನನ್ನು ಕರೆದುಕೊಂಡು ಹೋಗಿ ಅವನಿಗೆ ತಿಳಿಯದಂತೆ ಕೆರೆಗೆ ಆಹುತಿ

ಮಾಡುತ್ತಾನೆ. ಪರಿಣಾಮವಾಗಿ ಆ ವರ್ಷ ಕೆರೆ ನೀರಿನಿಂದ ತುಂಬಿ ಹೋಗುತ್ತದೆ. ಊರಿಗೆ ಹೋದ ಸೊಸೆ ಬಂದು ನೋಡಲಾಗಿ ತನ್ನ ಮಗು ಕಾಣದೆ ವಿಚಾರಿಸಿದಾಗ ಎಲ್ಲ ಸಮಾಚಾರ ತಿಳಿದು ತನ್ನ ಪಾಪವನ್ನು ಶಪಿಸಿಕೊಂಡು ತನ್ನ ಮಗನ ವಿರಹ ತಾಪದಿಂದ ರಾತ್ರಿ ಹಗಲು ಅಳುತ್ತ ಮಗನನ್ನು ತನಗೆ ಜೀವಂತವಾಗಿ ತಂದುಕೊಡುವಂತೆ ದೇವರಲ್ಲಿ ಮೊರೆ ಹೋಗುತ್ತಾಳೆ. ಊಟ ನಿದ್ರೆಯನ್ನು ಸಹ ಮಾಡದೆ ತನ್ನ ಮಗನ ಚಿಂತೆಯಲ್ಲಿಯೇ ಇರುವುದನ್ನು ಕಂಡು ಶಿವನು ಪ್ರತ್ಯಕ್ಷನಾಗಿ ಸತ್ತ ಮಗನಿಗೆ ಜೀವದಾನ ಮಾಡಿ ಆಕೆಗೆ ಒಪ್ಪಿಸುತ್ತಾನೆ. ಈ ಬಾಲಕನ ಹೆಸರು ಶಿರಾಳ ಅಂತಾ ಇದ್ದು, ಅವನ ನೆನಪಿಗಾಗಿ ಹಾಗೂ ಶಿವನು ಕರುಣೆಯಿಂದ ತನ್ನ ಮಗ ಶಿರಾಳನನ್ನು ಬದುಕಿಸಿ ಕೊಟ್ಟಿದ್ದಕ್ಕಾಗಿ ಕೃತಜ್ಞತೆಯಿಂದ ನೆನೆದು ಅವಳು ಶಿರಾಳನ ಪ್ರತಿ ಮೂರ್ತಿಯನ್ನು ಮಣ್ಣಿನಿಂದ ತಯಾರಿಸಿ ಪ್ರತಿ ವರ್ಷ ಪೂಜೆ ಮಾಡಿ ಸಂಪ್ರದಾಯದಿಂದ ಕರ್ಚಿಕಾಯಿ, ಶಾವಿಗೆ ಪಾಯಸ, ಬುತ್ತಿ ವಗ್ಗರೆ ತರತರಹದ ಅಡಿಗೆ ಮಾಡಿ ದೇವರಿಗೆ ನೈವೇದ್ಯ ಮಾಡಿ ಮಕ್ಕಳಿದ್ದ ಐದು ಮನೆಗಳಿಗೆ ಬೀರಿಸುತ್ತಾಳೆ. ಹೀಗೆಯೇ ಹೊಸದಾಗಿ ಮದುವೆಯಾದ ಹೆಣ್ಣು ಮಕ್ಕಳು ಐದು ವರ್ಷ ಶಿರಾಳ ಪೂಜೆ ಮಾಡಿ ಪ್ರತಿಸಲವೂ ಐದು ಮನೆಗೆ ಬೀರಿಸಿದಲ್ಲಿ ಮಕ್ಕಳು ಅಕಾಲ ಮೃತ್ಯುಗೀಡಾಗುವದು ತಪ್ಪುತ್ತದೆ ಎಂದು ಎಲ್ಲರ ತಿಳುವಳಿಕೆ ಆಗಿದೆ. ಹೀಗಾಗಿ ಈ ಶಿರಾಳ ಪೂಜೆ ರೂಢಿಯಲ್ಲಿ ಬಂದಿದೆ.

**ಶ್ರಾವಣ ಕೃಷ್ಣ ಬಿದಿಗೆ :**

ಮಂತ್ರಾಲಯದ ಶ್ರೀಗುರುಸಾರ್ವಭೌಮರ ಆರಾಧನೆ; ಆ ದಿನ ದೇಶದ ನಾನಾ ಕಡೆಯಲ್ಲಿ ಬಹುಭಕ್ತಿಯಿಂದ ಆರಾಧನಾ ಮಹೋತ್ಸವ ನಡೆಯುತ್ತದೆ.

**ನೂಲುಹುಣ್ಣಿಮೆ :**

ಇದು ಗಂಡಸರಿಗೆ ದೊಡ್ಡ ಹಬ್ಬ. ಪವಿತ್ರವಾದ ದಿನ ಹೋಮ-ಹವನ ಮಾಡಿ ವರ್ಷಕ್ಕೊಂದು ಸಲ ಶಾಸ್ತ್ರೀಯವಾಗಿ ಹೊಸ ಜನಿವಾರವನ್ನು ಹಾಕಿಕೊಳ್ಳಬೇಕು. ಈ ದಿನ ಅಕ್ಕತಂಗಿಯರು ಸಹೋದರರಿಗೆ ರಕ್ಷಾಬಂಧನ ಆಚರಿಸಿ ಅವರಿಗೆ ಆರತಿ ಬೆಳಗುವದು ವಾಡಿಕೆ.

**ಗೋಕುಲಾಷ್ಟಮಿ :**

ಶ್ರೀಕೃಷ್ಣ ಪರಮಾತ್ಮನು ಅವತರಿಸಿದ ದಿವಸ ಅಂದರೆ ಶ್ರಾವಣ ಬ|| ಅಷ್ಟಮಿ ಮಧ್ಯರಾತ್ರಿಯಂದು ಪರಮಾತ್ಮನು ಕೃಷ್ಣ ರೂಪದಿಂದ ಅವತರಿಸುತ್ತಾನೆ. ಆ ದಿನ ಹದಮಾಡಿದ ಮಣ್ಣಿನಿಂದ, ಕೃಷ್ಣಬಲರಾಮ, ಮೂರ್ತಿ ಮಾಡುವರಲ್ಲದೆ ಚಿಕ್ಕ ಮಣೆ ತೆಗೆದುಕೊಂಡು ನಾಲ್ಕೂ ದಿಕ್ಕಿಗೆ ಮಣ್ಣಿನಿಂದಲೇ ಗೋಕುಲದ ಕಲ್ಪನೆ ಬರುವಂತೆ ಕಟ್ಟೆ ಕಟ್ಟಿ ಕೃಷ್ಣ-ಬಲರಾಮ ಮೂರ್ತಿಗಳನ್ನು ಮಧ್ಯದ ಭಾಗದಲ್ಲಿ ಇಟ್ಟು ಅವರಿಬ್ಬರ ಸುತ್ತಲೂ ಆಕಳಗಳು, ಆಕಳುಕರು, ಹಾಲು ಮೊಸರು ಮಾರುವವರು, ಪೂತಣಿ, ಪುರಾಣ ಹೇಳುವಂತಿರುವ ಪುರಾಣಿಕನು, ಪುರಾಣ ಕೇಳಲು ಕೂತ ನಾಲ್ಕಾರು ಭಕ್ತರು, ನಂದಗೋಪ,

ಯಶೋಧೆ, ದೇವಕಿ ದೇವಿ-ವಸುದೇವ, ಸುಭದ್ರೆ ಇವುಗಳ ಚಿತ್ರಗಳನ್ನು ತಯಾರಿಸಿ ಇಡಬೇಕು. ಕೋಟೆಯ ಹೆಬ್ಬಾಗಿಲಿಗೆ ಎರಡು ದ್ವಾರಪಾಲಕರನ್ನು ಇಡಬೇಕು. ಹಾಗೆಯೆ ಚಿತ್ರ ಬಿಡಿಸುವಂತೆ ಇಲ್ಲಿ ಎಲ್ಲವನ್ನೂ ಮಣ್ಣಿನಿಂದಲೇ ತಯಾರಿಸಬೇಕು. ಪಂಚಾಂಗದಲ್ಲಿ ಹೇಳಿದ ಸಮಯಕ್ಕೆ ಸರಿಯಾಗಿ ಶ್ರದ್ಧೆ ಭಕ್ತಿಯಿಂದ ಕೃಷ್ಣನ ಪೂಜೆಯನ್ನು ಮಡಿಯಿಂದ ಮಾಡಬೇಕು. ಈ ದಿನ ತಪ್ಪದೇ ಉಪವಾಸವನ್ನು ಆಚರಿಸಬೇಕು. ರಾತ್ರಿ ಪೂಜೆ ಮಾಡಿದ ನಂತರ ಅರ್ಘ್ಯ ಕೊಡಬೇಕು. ಶುಂಠಿ ಬೆಲ್ಲ, ಹಾಗೂ ತರತರಹದ ಉಂಡೆ ಅಂದರೆ ಕೊಬ್ಬರಿ ಉಂಡೆ, ಪುರಾಣಿ ಉಂಡೆ, ಅಂಟಿನ ಉಂಡೆ, ಛತ್ತರಳು ಉಂಡೆ ಹಾಗೂ ತರತರಹದ ಹಣ್ಣು, ಮೊಸರು ಅವಲಕ್ಕಿ, ದೇವರ ನೈವೇದ್ಯಕ್ಕೆ ಇಡಬೇಕು. ರಾತ್ರಿಯೆಲ್ಲಾ ಜಾಗರಣೆ ಮಾಡಿ ದೇವರನ್ನು ಸ್ತುತಿಸಬೇಕು. ಕೃಷ್ಣಲೀಲೆಯನ್ನು ಹೇಳುವ ಹರಿದಾಸರಿಂದ ರಚಿಸಲ್ಪಟ್ಟ ಪದಗಳನ್ನು ಸುಸ್ವರದಿಂದ ಹಾಡಿ ಕೃತಕೃತ್ಯರಾಗಬೇಕು. ಮರುದಿವಸ ಪಂಚಾಂಗದ ಪ್ರಕಾರ (ಅವರವರ ಮಠದ ಪಂಚಾಂಗಕ್ಕನುಸರಿಸಿ) ಶ್ರೀ ಕೃಷ್ಣನ ಪೂಜೆ ನೈವೇದ್ಯ ಮಾಡಿ ತೀರ್ಥ ಪ್ರಸಾದ ಸ್ವೀಕರಿಸಬೇಕು. ಪಾರಣೆ ವೇಳೆ ದಂಪತ್ತು ಭೋಜನ ಮಾಡಿಸಿದರೆ ವಿಶೇಷ ಪುಣ್ಯವಿದೆ. (ನೈವೇದ್ಯಕ್ಕೆ ಕರಚಿಕಾಯಿ, ಕೋಸಂಬರಿ, ತೇಂಗಲು, ಗವಲಿ ಪಾಯಸ, ಚಿತ್ರಾನ್ನ ಬುತ್ತಿ, ನಾನಾ ತರಹದ ತರಕಾರಿ ಅಡಿಗೆ ಮಾಡಬೇಕು.)

**ಕೃಷ್ಣನಿಗೆ ಅರ್ಘ್ಯ ಕೊಡುವಾಗ ಹೇಳುವ ಮಂತ್ರ :** ಒಂದು ಅಗಲವಾದ ಪಾತ್ರೆಯಲ್ಲಿ ಶ್ರೀ ಕೃಷ್ಣನ ಪ್ರತಿಮೆಯನ್ನು ಇಟ್ಟು ದಕ್ಷಿಣೆ ನೀರು, ತೆಗೆದುಕೊಂಡು ಕೆಳಗೆ ಹೇಳಿದಂತೆ ಮಂತ್ರ ಹೇಳಿ ಅರ್ಘ್ಯವನ್ನು ಕೊಡಬೇಕು.

"ಜಾತಃಕಂಸ ವಧಾರ್ಥಾಯ ಭೂಭಾರೋತ್ತಾರಣಾಯಚ
ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯಚ ।
ಪಾಂಡವಾನಾಂ ಹಿತಾರ್ಥಾಯ ಧರ್ಮ ಸಂಸ್ಥಾಪನಾಯಚ ।
ಗೃಹಾಣಾರ್ಘ್ಯಂ ಮಯಾದತ್ತಂ ದೇವಕ್ಯಾ ಸಹಿತೋ ಹರೇ ॥

"ದೇವಕೀ ಸಹಿತಾಯ ಶ್ರೀ ಕೃಷ್ಣಾಯ ನಮಃ ಇದಮರ್ಘ್ಯಂ ಇದಂ ಅರ್ಘ್ಯಂ ಸಮರ್ಪಯಾಮಿ ॥"

ನಂತರ "ಚಂದ್ರಾರ್ಘ್ಯ ಮಂತ್ರಾಃ" :

"ಕ್ಷೀರೋದಾರ್ಣವ ಸಂಭೂತ ಅತ್ರಿನೇತ್ರ ಸಮುದ್ಭವಃ
ಗೃಹಾಣಾರ್ಘ್ಯಂ ಮಯಾದತ್ತಂ ಶಶಾಂಕೇದೋ ರೋಹಿಣ್ಯಾ ಸಹಿತೋ ಮಮ"

ಶಂಖದಲ್ಲಿ ಹಾಲು, ಅಡಿಕೆ ಎಲೆ, ದಕ್ಷಿಣೆಗಳನ್ನು ಇಟ್ಟು ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು. ನಂತರ ಪುನಃ ಶ್ರೀ ಕೃಷ್ಣನಿಗೆ ಮತ್ತೊಮ್ಮೆ ಅರ್ಘ್ಯವನು ಕೊಡಬೇಕು.

# ಭಾದ್ರಪದ ಮಾಸ

## ಸ್ವರ್ಣಗೌರೀವ್ರತ :

ಭಾದ್ರಪದ ಶು॥ ತದಿಗೆ ದಿನದಂದು ಈ ವ್ರತವನ್ನು ಮಾಡಬೇಕು. ಈ ವ್ರತಕ್ಕೆ 'ಹರಿತಾಲಿಕಾ' ವ್ರತವೆಂತಲೂ ಆಚರಿಸುತ್ತಾರೆ. ಕೆಲವರು ಗೌರಿ ಮೂರ್ತಿಯನ್ನು ಇಟ್ಟುಕೊಂಡು ಪೂಜಿಸಿದರೆ ಮತ್ತೆ ಕೆಲವರು ತಂಬಿಗೆ ಮೇಲೆ ಟೆಂಗಿನಕಾಯಿ ಇರಿಸಿ ಶೃಂಗರಿಸಿ ಪೂಜೆ ಮಾಡುತ್ತಾರೆ. ಪುರೋಹಿತರಿಂದ ಮಾರ್ಗದರ್ಶನ ಪಡೆದು ಈ ವ್ರತವನ್ನು ಆಚರಿಸಬೇಕು. ದಂಪತ್ತು ಕರೆದು ಭೋಜನ ಮಾಡಿಸಿ ಮುತ್ತೈದಿಗೆ ಮರದ ಬಾಗಿಣ ಕೊಡಬೇಕು.

ಹಳೆಯ ಮೈಸೂರು ಪ್ರಾಂತದಲ್ಲಿ ಈ ವ್ರತವನ್ನು ಸಾಮಾನ್ಯವಾಗಿ ಎಲ್ಲರೂ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ವ್ರತವನ್ನು ಕನಿಷ್ಟ 16 ವರ್ಷ ಮಾಡಿ ಉದ್ಯಾಪನೆ ಮಾಡುವದು ಸಂಪ್ರದಾಯವಿದೆ. ಮನೆಯಲ್ಲಿ ಒಂದು ಸುಂದರವಾದ ಮಂಟಪ ತಯಾರಿಸಿ ಆ ಮಂಟಪದಲ್ಲಿ ಗೋಪಾದವಷ್ಟು ಭೂಮಿಯನ್ನು ಗೋಮಯದಿಂದ ಸಾರಿಸಿ ರಂಗವಲ್ಲಿ ಹಾಕಿ ಒಂದು ಪೀಠವನ್ನು ಹಾಕಿ ಆ ಪೀಠದಲ್ಲಿ ಧಾನ್ಯರಾಶಿಯಲ್ಲಿ ಪೂರ್ಣಪಾತ್ರೆ (ಕಲಶ) ಯನ್ನು ಸ್ಥಾಪಿಸಿ ಮತ್ತೊಂದು ತಾಮ್ರ ಪಾತ್ರೆಯಲ್ಲಿ ಎಳ್ಳು, ಅಕ್ಕಿ, ಹಾಕಿ ಅದೇ ಪೀಠದಲ್ಲಿರಿಸಬೇಕು. ಬಂಗಾರದಿಂದ ಅಥವಾ ಬೆಳ್ಳಿಯಿಂದ ತಯಾರಿಸಿದ ಪಾರ್ವತಿ ಪರಮೇಶ್ವರ ಪ್ರತಿಮೆಯನ್ನು ಆ ಕಲಶದಲ್ಲಿ ಇಡಬೇಕು. ಆ ಪ್ರತಿಮೆಗೆ ಶಾಸ್ತ್ರೋಕ್ತ ರೀತಿಯಿಂದ ಅಭಿಷೇಕಾದಿ ಮಾಡಿ ಅಲಂಕಾರ ಮಾಡಿ ಪೂಜಿಸಬೇಕು. ರಾತ್ರಿ ಜಾಗರಣೆ ಮಾಡಿ, ನೃತ್ಯ ಗೀತೆಗಳನ್ನು ನಡೆಸಬೇಕು. ಪ್ರಾತಃಕಾಲದಲ್ಲಿ ಮಂಗಳ ಸ್ನಾನ ಮಾಡಿ ಹೋಮ-ಹವನ ಪೂರೈಸಿ ಪೂಜಿಸಿ 16 ದಂಪತ್ತು ಭೋಜನ ಮಾಡಿಸಬೇಕು. ಅಲ್ಲದೆ 16 ಬಾಗಿಣವನ್ನು ಕೊಡಬೇಕು. ನಂತರ ಬ್ರಾಹ್ಮಣ ಸುವಾಸಿನಿಯರಿಂದ ಆಶೀರ್ವಾದ ಪಡೆದು ಗೌರಿ ಪ್ರಸಾದವನ್ನು ತಾವೂ ಸ್ವೀಕರಿಸಿ ಕೃತಾರ್ಥರಾಗಬೇಕು.

ಸ್ವರ್ಣಗೌರಿ ಕಥೆ ಹೀಗಿದೆ –

(ಸ್ಕಂದ ಪುರಾಣದಲ್ಲಿ ಪರಮೇಶ್ವರನು ಕುಮಾರ ಸ್ವಾಮಿಗೆ ಹೇಳಿದುದನ್ನು ಸೂತರು ಶೌನಕಾದಿ ಮುನಿಗಳಿಗೆ ಹೇಳಿದ್ದು).

ಪೂರ್ವದಲ್ಲಿ ಸರಸ್ವತೀ ನದೀ ತೀರದಲ್ಲಿ ವಿಮಲಾಪುರಿ ಎಂಬ ಪಟ್ಟಣ. ಈ ಪಟ್ಟಣವನ್ನು ಚಂದ್ರಪ್ರಭನೆಂಬ ಅರಸನು ಆಳುತ್ತಿದ್ದನು. ಅವನು ಬಹಳೇ ಧರ್ಮವಂತನಾಗಿದ್ದನು. ಆತನಿಗೆ ಇಬ್ಬರು ಪತ್ನಿಯರು. ರಾಜನು ಹಿರಿಯ ಹೆಂಡತಿಯನ್ನು

ವಿಶೇಷವಾಗಿ ಪ್ರೀತಿಸುತ್ತಿದ್ದನು. ಒಂದು ದಿನ ರಾಜನು ಬೇಟೆಗಾಗಿ ಅರಣ್ಯಕ್ಕೆ ಹೋದನು. ಬೇಟೆಯಾಡಿ ದಣಿವು ಆಗಿದ್ದರಿಂದ ಹತ್ತಿರವಿದ್ದ ಒಂದು ಸರೋವರದ ಬಳಿಗೆ ವಿಶ್ರಾಂತಿಗಾಗಿ ಬಂದನು. ಈ ಸರೋವರದ ಸೌಂದರ್ಯಕ್ಕೆ ಒಲಿದು ಕೆಲವು ಅಪ್ಸರಾ ಸ್ತ್ರೀಯರು ವ್ರತವನ್ನು ಆಚರಿಸುತ್ತಿದ್ದರು. ರಾಜನು ಅವರು ಮಾಡುವ ವ್ರತವನ್ನು ಆಚರಿಸುತ್ತಿದ್ದರು. ರಾಜನು ಅವರು ಮಾಡುವ ವ್ರತವನ್ನು ನಿರೀಕ್ಷಿಸಿಯೇ ತನ್ನ ಶ್ರಮವನ್ನು ಕಳೆದುಕೊಂಡಂತವನಾಗಿ ಕುತೂಹಲದಿಂದ ಆ ಸ್ತ್ರೀಯರು ಮಾಡುವ ವ್ರತದ ಬಗ್ಗೆ ತಿಳಿಯಬಯಸಿದನು. ಆಗ ತಾವು "ಸ್ವರ್ಣಗೌರೀ" ವ್ರತವನ್ನು ಮಾಡುವುದಾಗಿ ರಾಜನಿಗೆ ತಿಳಿಯಪಡಿಸಿದರು. ರಾಜನು ಆ ವ್ರತದ ವಿಧಾನವನ್ನು ತಿಳಿಸಲು ಅವರಿಗೆ ಬಿನ್ನಹ ಮಾಡಿಕೊಳ್ಳಲು ಅವರು ಹೇಳಿದ್ದು -

"ಮುಖ್ಯವಾಗಿ ಈ 'ಸ್ವರ್ಣಗೌರೀ' ವ್ರತವನ್ನು ಭಾದ್ರಪದ ಶು॥ ತದಿಗೆ ದಿನದಂದು ಕನಿಷ್ಠ ಹದಿನಾರು ವರ್ಷ ಆಚರಿಸಿ ವ್ರತದ ಅವಧಿ ಮುಗಿಯುವದರೊಳಗಾಗಿ ಉದ್ಯಾಪನೆ ಮಾಡಬೇಕು ಅನ್ನಲು ತಕ್ಷಣವೇ ತಾನು ಅಲ್ಲಿಯೇ ವ್ರತವನ್ನು ಆಚರಿಸಿ ದಾರ ಬಂಧನ ಮಾಡಿಕೊಂಡು ಮನೆಗೆ ಬಂದು ತನ್ನ ಪತ್ನಿಯರಿಬ್ಬರಿಗೂ ಈ ವ್ರತವನ್ನು ಮಾಡಲು ಹೇಳಿದನು. ಹಿರಿಯ ಹೆಂಡತಿಗೆ ಅದು ಮನಸ್ಸಿಗೆ ಬಾರದೇ ಗಂಡನು ಕಟ್ಟಿಕೊಂಡು ಬಂದ ದಾರವನ್ನು ಕಸಿದು ಒಂದು ಗಿಡದ ಮೇಲೆ ಎಸೆದಳು. ಪತಿಯು ಹಾಗೆ ಮಾಡಬಾರದಾಗಿ ಎಷ್ಟು ಹೇಳಿದರೂ ಆಕೆ ಕೇಳಲಿಲ್ಲ. ಆದರೆ ಆಕೆಯು ಹಾಗೆ ಒಗೆದ ಪವಿತ್ರ ದಾರದಿಂದ ಆ ಒಣಗಿದ ಗಿಡವು ಅಕಾಲದಲ್ಲಿ ಚಿಗುರಿ ಹೂ ಬಿಟ್ಟಿತು. ಅಲ್ಲದೆ ಫಲ ವೃದ್ಧಿಯಾಯಿತು. ರಾಜನ ಕಿರಿಯ ಹೆಂಡತಿ ಈ ಘಟನೆಯನ್ನು ನೋಡಿ ಚಕಿತಳಾಗಿ ತಾನು ಆ ಗಿಡದ ಮೇಲೆ ಎಸೆದಿದ್ದ ದಾರವನ್ನು ತಂದು ಭಕ್ತಿಯಿಂದ ಧಾರಣ ಮಾಡಿಕೊಂಡು ರಾಜನ ಮಾರ್ಗದರ್ಶನದಂತೆ ವ್ರತವನ್ನು ಆಚರಿಸಿದಳು. ಹಿರಿಯ ಹೆಂಡತಿಯು ವ್ರತದ ಬಗ್ಗೆ ತಿರಸ್ಕಾರ ಮಾಡಿದ ಕಾರಣದಿಂದ ರಾಜನ ಅವಕೃಪೆಗೆ ಪಾತ್ರಳಾಗಿ ಮನೆಬಿಟ್ಟು ಅರಣ್ಯ ಸೇರಿ ಋಷಿ ಆಶ್ರಮ ಸೇರಲು ಬಯಸಿದಳು ಆದರೆ ಯಾವ ಋಷಿಗಳೂ ಇವಳಿಗೆ ಆಶ್ರಯ ಕೊಡಲಿಲ್ಲ. ಪಶ್ಚಾತ್ತಾಪದಿಂದ ಕಂಡ ಕಂಡ ದೇವತೆಗಳಿಗೆ ಶರಣು ಹೋದಳು. ಪ್ರಯೋಜನವಾಗಲಿಲ್ಲ. ನಂತರ ಸ್ವರ್ಣಗೌರಿಗೇನೇ ಶರಣು ಬಂದು ತನ್ನ ತಪ್ಪನ್ನು ಮನ್ನಿಸಬೇಕೆಂದು ಅನನ್ಯ ಭಕ್ತಿಯಿಂದ ಬೇಡಿಕೊಳ್ಳಲು ಸ್ವರ್ಣಗೌರಿಯು ಪ್ರತ್ಯಕ್ಷಳಾಗಿ ಅವಳು ಮಾಡಿದ ತಪ್ಪನ್ನು ಮನ್ನಿಸಿ ಮೊದಲಿನಂತೆ ತನ್ನ ಗಂಡನು ಈಕೆಯನ್ನು ಪ್ರೀತಿಸುವಂತೆ ಕರುಣಿಸುವದಲ್ಲದೆ ಆಕೆಗೆ ಇಷ್ಟಾರ್ಥ ಸಿದ್ಧಿಯನ್ನು ಅನುಗ್ರಹಿಸಿ ಅಂತರ್ಧಾನವಾದಳು".

ಯಾರು ಈ ಸ್ವರ್ಣಗೌರಿ ವ್ರತವನ್ನು ಶ್ರದ್ಧೆ ಭಕ್ತಿಯಿಂದ ಆಚರಿಸುವರೋ ಅವರಿಗೆ ಸಕಲ ಸೌಭಾಗ್ಯ ಉಂಟಾಗುವದು. ಇದು ಆಜನ್ಮ ವ್ರತವು ಉದ್ಯಾಪನೆ ಆದ ಮೇಲೆ ಬಿಡುವ ಹಾಗಿಲ್ಲ.

**ಗಣೇಶ ಚತುರ್ಥಿ :**

ಭಾದ್ರಪದ ಶುದ್ಧ ಚತುರ್ಥಿ ಅಂದರೆ ಗಣೇಶ ಚತುರ್ಥಿ. ಸಿದ್ಧಿವಿನಾಯಕ ಚತುರ್ಥಿ ಭಾರತ ದೇಶದಲ್ಲಿನ ಎಲ್ಲ ಭಾಗದಲ್ಲಿಯೂ ಜನರು ಬಹು ವಿಜೃಂಭಣೆಯಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಮಣ್ಣಿನಿಂದ ಗಣೇಶನ ಮೂರ್ತಿಯನ್ನು ತಯಾರಿಸಿ ಅವುಗಳಿಗೆ ಅಂದವಾಗಿ ಬಣ್ಣ ಹಚ್ಚಿ, ಅನೇಕ ಆಕಾರದಲ್ಲಿ ಮಾಡಿ ಮಾರಲು ಇಟ್ಟಿರುತ್ತಾರೆ. ಪ್ರತಿ ಮನೆಯವರು ತಮ್ಮ ತಮ್ಮ ಯೋಗ್ಯತೆಗೆ ಅನುಸರಿಸಿ ಹಣ ಕೊಟ್ಟು ಕೊಂಡುಕೊಂಡು ತಂದು ಮನೆಯಲ್ಲಿ ಶೃಂಗರಿಸಿದ ಮಾಡದಲ್ಲಿ ಇಟ್ಟು ವೈಭವದಿಂದ ಪೂಜಿಸುತ್ತಾರೆ. ಆ ದಿನ ಗಣಪನಿಗೆ ಮೋದಕವನ್ನು (ಸಿಹಿ ಕಡಬು) ತಯಾರಿಸಿ ನೈವೇದ್ಯ ಮಾಡುತ್ತಾರೆ.

ಬೆಳಗ್ಗೆ ಹಾಗೂ ರಾತ್ರಿ ಗಣಪ್ಪನಿಗೆ ಪೂಜೆ ಸಲ್ಲಿಸಿ ಮಂತ್ರಪುಷ್ಪವನ್ನು ಮಾಡಬೇಕು. ಕೆಲವರು ಅದೇ ದಿನ ಗಣಪ್ಪನನ್ನು ಕಳಿಸಿದರೆ, (ವಿಸರ್ಜನೆ) ಕೆಲವರು ೩ ದಿನಕ್ಕೆ, ಕೆಲವರು ೫ ದಿನಕ್ಕೆ, ಕೆಲವರು ಗಣಪತಿಯನ್ನು ದಸರೆ ದಿನದವರೆಗೆ ಪೂಜಿಸಿ ಅಂದು ಗಣಪ್ಪನನ್ನು ಕಳಿಸುವ ಪದ್ಧತಿಯೂ ಕೆಲವರಲ್ಲಿದೆ.

ವಿದ್ಯಾರ್ಥಿಗಳಿಗೆ ವಿದ್ಯಾ ಸಂಪಾದನೆ ನಿತ್ಯ ಸಂಸಾರಿಗಳಿಗೆ ಕಷ್ಟ ಪರಿಹಾರಾರ್ಥ, ವ್ಯಾಪಾರಸ್ಥರಿಗೆ ತಮ್ಮ ವ್ಯಾಪಾರ ಅಭಿವೃದ್ಧಿಗೋಸುಗ ಹೀಗೆ ಸಮಾಜದ ಎಲ್ಲ ತರಹದ ಜನರು ವಿಘ್ನೇಶ್ವರ (ಗಣಪತಿ)ನನ್ನು ಅನನ್ಯ ಭಕ್ತಿಯಿಂದ ಪೂಜಿಸುತ್ತಾರೆ.

ಸಾರ್ವಜನಿಕ ಆಯಕಟ್ಟಿನ ಸ್ಥಳಗಳಲ್ಲಿ ಭವ್ಯ ಮಂಟಪ ಹಾಕಿ ಅದಷ್ಟು ದೊಡ್ಡದಾದ ಗಣಪತಿಯ ವಿಗ್ರಹವನ್ನು ತಂದು ಇಟ್ಟು, ವೈಭವದಿಂದ ಪೂಜೆ ಮಾಡುವದನ್ನು ನಾವು ಕಾಣಬಹುದು. ಗಣಪತಿ ಇಟ್ಟ ಸಭಾ ಮಂಟಪದಲ್ಲಿ, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ, ಉಪನ್ಯಾಸ, ಸಂಗೀತ, ನೃತ್ಯ ಮುಂತಾದವುಗಳನ್ನು ಜನರು ನೆರವೇರಿಸಿ ಸಂತೋಷಪಡುತ್ತಾರೆ.

ಈ ಸಾರ್ವಜನಿಕವಾಗಿ ಗಣಪತಿಯನ್ನು ಪೂಜಿಸುವ ಪದ್ಧತಿ ದಿ|| ಲೋಕಮಾನ್ಯ ತಿಲಕರಿಂದ ಪ್ರಾರಂಭವಾಗಿರುವದನ್ನು ನಾವು ಸ್ಮರಿಸಬಹುದಾಗಿದೆ. ಮೊದಲು ಮಹಾರಾಷ್ಟ್ರ ಪ್ರಾಂತದ ಮುಂಬಾಯಿ ಪುಣೆ ನಗರಗಳಲ್ಲಿ ಸಾರ್ವಜನಿಕ ಗಣೇಶೋತ್ಸವವು ಪ್ರಾರಂಭವಾದದ್ದು, ಈಗ ದೇಶದ ಅನೇಕ ಭಾಗಗಳಲ್ಲಿಯೂ ಆ ಪದ್ಧತಿ ಪ್ರಾರಂಭವಾಗಿದೆ. ಬೆಂಗಳೂರು ನಗರದಲ್ಲಿಯೂ ಪ್ರತಿ ಓಣಿ ಓಣಿಗಳಲ್ಲಿ ವಿಶೇಷವಾಗಿ ತರುಣರ ಒಂದು ಸಂಘಟನೆಯಿಂದ, ಸಾರ್ವಜನಿಕ ಗಣೇಶೋತ್ಸವವು ನಡೆಯುತ್ತಿರುತ್ತವೆ.

ಗಣೇಶನ ವಿಸರ್ಜನೆ ಪೂನಾ ನಗರದಲ್ಲಿ ಒಂದು ಅಭೂತ ಪೂರ್ವವಾದ ಕಾರ್ಯಕ್ರಮ ಎಂದು ಹೇಳಬಹುದು. ಪೂನಾ ನಗರದಲ್ಲಿ ಸಾರ್ವಜನಿಕ ಗಣೇಶಗಳೆಲ್ಲವನ್ನು ವಾದ್ಯ-ವೈಭವಗಳೊಂದಿಗೆ ಮೆರವಣಿಗೆಯಲ್ಲಿ ಸಾಲಾಗಿ ತಂದು

ಮೊದಲೇ ನಿರ್ಧರಿಸಿದ ದೊಡ್ಡ ಸರೋವರಕ್ಕೆ ಒಯ್ದು ಅಲ್ಲಿ ಪೂಜೆ ಸಲ್ಲಿಸಿ ಸರೋವರದಲ್ಲಿ ವಿಸರ್ಜನೆ ಮಾಡುತ್ತಾರೆ. ಈ ಅಪೂರ್ವ ಕಾರ್ಯಕ್ರಮ ನೋಡಲು ಲಕ್ಷಾವಧಿ ಜನರು ಸೇರಿರುತ್ತಾರೆ. ಪರಸ್ಥಳದಿಂದಲೂ ಈ ಉತ್ಸವವನ್ನು ನೋಡಲು ಭಕ್ತರು ಬಂದಿರುತ್ತಾರೆ.

ಗಣೇಶ ಚವತಿ ದಿವಸ ಚಂದ್ರ ದರ್ಶನ ಮಾಡಬಾರದಾಗಿ ಒಂದು ನಿಯಮ ಉಂಟು. (ಇದಕ್ಕೆ ಇತಿಹಾಸವಿದೆ.) ಆದರೆ ಆಕಸ್ಮಾತ್ತಾಗಿ ಚಂದ್ರನನ್ನು ನೋಡಿದಲ್ಲಿ –

**"ಸಿಂಹಃ ಪ್ರಸೇನಮ ವಧೀತ್ ಸಿಂಹೋ ಜಾಂಬವತಾ ಹತಃ**
**ಸುಕುಮಾರಕ ಮಾರೋದೀಃ ತವಹ್ಯೇಷಸ್ಯ ಮಂತಕಃ"**

ಈ ಮಂತ್ರವನ್ನು ಪಠಿಸಬೇಕು ಹಾಗೂ ಶಮಂತಕೋಪಾಖ್ಯಾನ ಕೇಳಬೇಕು. ಅಂದರೆ ಚಂದ್ರದರ್ಶನ ಮಾಡಿದ ದೋಷ ಪರಿಹಾರವಾಗುವದೆಂದು ಅದೇ ನಿಯಮ ಹೇಳುತ್ತದೆ. ಗಣೇಶನು ಸಕಲ ವಿಘ್ನ ಪರಿಹಾರಕನಾದ್ದರಿಂದ ಈತನಿಗೆ 'ವಿಘ್ನೇಶ್ವರ' ಎಂತಲೂ ಹೆಸರು. ಇದೊಂದು ಸಕಲರಿಗೆ ವರ್ಷದಲ್ಲಿ ಬರುವ ದೊಡ್ಡ ಉತ್ಸವವಾಗಿದೆ.

**ಋಷಿಪಂಚಮಿ :**

ಋಷಿಪಂಚಮಿ ಪೂಜೆ ಏಕೆ ಮಾಡಬೇಕೆಂದರೆ ನಮ್ಮ ಆಯುಷ್ಯ (ಅರ್ಧ) ಸಂಸಾರದಲ್ಲಿ ಕಳೆದುಹೋಗಿರುತ್ತದೆ. ಮುಂದಾದರು ನಾವು ಋಷಿಗಳಂತೆ ದೇವರ ಧ್ಯಾನ, ತಪಸ್ಸು ಮಾಡಿ ಮನೋನಿಗ್ರಹ ಮಾಡಿ ದೇವರನ್ನು ಜಪಿಸಬೇಕೆಂದು ಋಷಿಗಳನ್ನು ಬೇಡಿಕೊಳ್ಳುವದೆ ಋಷಿಗಳ ಪೂಜೆ ಅಲ್ಲದೆ ರಜೋದರ್ಶನದಲ್ಲಿ ನಾವು ಮಾಡಿದ ದೋಷಪರಿಹಾರಕವಾಗಿ ಬೇಡಿಕೊಳ್ಳಬೇಕು. ದೋಷಗಳು ಯಾವವು ಅಂದರೆ,

ಭಾದ್ರಪದ ಬ|| ಪಂಚಮಿ ಅಂದರೆ ಗಣೇಶ ಚವತಿ ಮರುದಿನವೇ ಋಷಿಪಂಚಮಿ ವ್ರತ. ಹೆಂಗಸರು ಮುಟ್ಟಾಗುವದು ನಿಂತ ಮೇಲೆ ಈ ವ್ರತವನ್ನು ತಪ್ಪದೇ ಮಾಡಲೇಬೇಕು. ಈ ವ್ರತದ ಅವಧಿ 8 ವರ್ಷ. ಅಂದರೆ 8 ವರ್ಷವೂ ಪ್ರತಿವರ್ಷ ಮಾಡುತ್ತ ಬರಬೇಕು. ಈ ಎಂಟು ವರ್ಷದ ಅವಧಿಯ ಆದಿಯಲ್ಲಾಗಲಿ ಮಧ್ಯದಲ್ಲಿ ಆಗಲಿ ನಂತರ 8 ವರ್ಷ ಮುಗಿದ ತಕ್ಷಣವಾಗಲಿ ಉದ್ಯಾಪನೆ ಮಾಡಬಹುದು. ಪಂಚಮಿದಿನ ಸೂರ್ಯೋದಯಕ್ಕೆ ಸರಿಯಾಗಿ ನದಿ, ಸರೋವರ, ಅಥವಾ ಬಾವಿಯ ನೀರಿನಿಂದ, ಅಭ್ಯಂಗ ಸ್ನಾನ ಮಾಡಬೇಕು. 108 ಉತ್ತರಾಣಿ ಕಡ್ಡಿಗಳಿಂದ ಹಲ್ಲುಗಳನ್ನು ಉಜ್ಜಬೇಕು. ಹಾಗೂ 108 ದಳಗಳನ್ನು ಸ್ನಾನ ಮಾಡುವಾಗ ತಲೆಯ ಮೇಲೆ ಇಟ್ಟುಕೊಂಡು 108 ತಂಬಿಗೆ ನೀರು ಸ್ನಾನ ಮಾಡಬೇಕು. ಉತ್ತರಾಣಿ ಜೊತೆ ಮೃತ್ತಿಕಾ, ನೆಲ್ಲಿಕಾಯಿ, ಎಳ್ಳುಗಳನ್ನು ಮೈಗೆ ಹಚ್ಚಿಕೊಳ್ಳಬೇಕು.

ಸ್ನಾನಾನಂತರ ಬಿಳಿ ಪತ್ತಲ, ಬಿಳಿ ಕುಪ್ಪಸ ಧರಿಸಬೇಕು. ನಂತರ ಬಲ್ಲವರಿಂದ (ಪುರೋಹಿತರಿಂದ) ಮಂತ್ರ ಹೇಳಿಸಿಕೊಂಡು ಸಂಕಲ್ಪ ಮಾಡಿ ಋಷಿಗಳ ಪೂಜೆ ಮಾಡಬೇಕು. ಮುಖ್ಯವಾಗಿ ಆ ದಿನ ಪೂರ್ಣ ಉಪವಾಸ ಮಾಡಬೇಕು.

ಋಷಿಗಳ ಪೂಜೆ ಕ್ರಮ --

ಒಂದು ಕಟ್ಟಿಗೆ ಮಣೆಯನ್ನು ಸ್ವಚ್ಛವಾಗಿ ತೊಳೆದು ವರೆಸಿ ಅದರ ಮೇಲೆ ಹೊಸ ವಂಚೆ ಹಾಸಬೇಕು. ಅದರ ಮೇಲೆ ತುಂಬ ಅಕ್ಕಿ ಹಾಕಬೇಕು. ಬಿಳಿ ಸಣ್ಣ 8 ಕಲ್ಲುಗಳನ್ನು ನದಿಯಲ್ಲಿ ಆರಿಸಿ ತಂದು ಅಕ್ಕಿ ಮೇಲೆ ಸಾಲಾಗಿ ಇಡಬೇಕು. (ಸಪ್ತ ಋಷಿಗಳು ಅರುಂಧತಿ). ಸಪ್ತ ಋಷಿಗಳ ಹೆಸರುಗಳು-

1) ವಶಿಷ್ಠ 2) ವಿಶ್ವಾಮಿತ್ರ 3) ಅತ್ರಿ 4) ಭಾರದ್ವಾಜ 5) ಗೌತಮ 6) ಜಮದಗ್ನಿ 7) ಕಶ್ಯಪ ಅಲ್ಲದೆ ವಶಿಷ್ಠ ಋಷಿಗಳ ಧರ್ಮಪತ್ನಿ ಅರುಂಧತಿ. ಹೀಗೆ ಈ ಎಂಟು ಅಪರೋಕ್ಷ ಜ್ಞಾನಿಗಳ ಪ್ರತೀಕವೇ 8 ಬಿಳಿ ಕಲ್ಲುಗಳು ಅರುಂಧತಿಗೆ, ಬಳೆ, ಮಂಗಳ ಸೂತ್ರ, ಗೆಜ್ಜೆವಸ್ತ್ರ ಏರಿಸಬೇಕು. ಸಪ್ತ ಋಷಿಗಳೂ ಜನಿವಾರ ಹಾಗೂ ಗೆಜ್ಜೆವಸ್ತ್ರ ಏರಿಸಬೇಕು. ಎಂಟೂ ಮಹಾಮಹಿಮರಿಗೆ ಬಾಗಿಣ ಕೊಡಬೇಕು. (ಬಾಗಿಣ = ಅಕ್ಕಿ + ಅಡಿಕೆಬೆಟ್ಟು + ಹಣ್ಣು + ದಕ್ಷಿಣೆ) ಹೀಗೆ, ಅಲಂಕರಿಸಿ ಋಷಿಗಳ ಪೂಜೆಯನ್ನು ಶ್ರದ್ಧೆಯಿಂದ ನೆರವೇರಿಸಬೇಕು.

ಮರುದಿನ ಮಡಿಯಿಂದ ಸ್ನಾನ ಮಾಡಿ, ತರತರಹದ ಅಡಿಗೆ ಅಂದರೆ ವಿಶೇಷವಾಗಿ ಹೋಳಿಗೆ, ಶಾವಿಗೆ ಪಾಯಸ, ಉದ್ದಿನ ಹಪ್ಪಳ, ಅಂಬೋಡಿ, ಚಿತ್ರಾನ್ನ ಮಾಡಿ ದೇವರ ಪೂಜೆ ನೈವೇದ್ಯ, ವೈಶದೇವ ಋಷಿಗಳಿಗೆ ಪೂಜೆ, ನೈವೇದ್ಯ ಸಲ್ಲಿಸಿ ದಂಪತ್ತು ಭೋಜನ ಮಾಡಿಸಿ, ಮನೆಯಲ್ಲಿ ಹಿರಿಯರ ಊಟವಾದ ಮೇಲೆ ಉಳಿದ ಸದಸ್ಯರೊಡಗೂಡಿ ತಾನು ಪಾರಣೆ ಮಾಡಬೇಕು. ಸ್ತ್ರೀಯರಿಗೆ ಈ ಋಷಿಪಂಚಮಿ ವ್ರತವು ಅತಿ ಮುಖ್ಯವಾಗಿದ್ದು ಪ್ರತಿಯೊಬ್ಬ ಸ್ತ್ರೀಯು ಯೋಗ್ಯ ಸಮಯದಲ್ಲಿ 'ಋಷಿಪಂಚಮಿ' ವ್ರತವನ್ನು ಆಚರಿಸಿ ಪುಣ್ಯಭಾಗಿಯಾಗಬೇಕು. ಮರದ ಬಾಗಿಣ ಕೊಡಬೇಕು.

**ಋಷಿಪಂಚಮಿ ವ್ರತದ ಮಹಿಮೆ :** ಧರ್ಮರಾಜನಿಗೆ ಶ್ರೀ ಕೃಷ್ಣನು ಹೇಳಿದ್ದು ಹೀಗೆ- "ಹಿಂದಕ್ಕೆ ಸುಮತಿ ಎಂಬ ಬ್ರಾಹ್ಮಣನಿದ್ದನು. ಆತನು ಸದಾಚಾರಿಯೂ ಸತ್ಯವಂತನೂ ಆಗಿದ್ದನು. ಹೊಟ್ಟೆಪಾಡಿಗಾಗಿ ಬೇಸಾಯ ಮಾಡುತ್ತಿದ್ದನು. ಅವನ ಧರ್ಮಪತ್ನಿ ಮುಟ್ಟಾದಾಗ ಯಾರನ್ನೂ ಮುಟ್ಟದೆ ನಾಲ್ಕೂ ದಿವಸ ತನ್ನ ಮನೆಯಲ್ಲಿಯೇ ಒಂದು ಪ್ರತ್ಯೇಕ ಸ್ಥಳದಲ್ಲಿದ್ದು ಕಾಲ ಕಳೆಯದೆ ದಿನದಂತೆ ಮನೆಯೊಳಗೆಲ್ಲ ಸಂಚರಿಸಿ ಅಡಿಗೆ-ಊಟ ತಾನೂ ಮಾಡಿ ಗಂಡು ಮಕ್ಕಳಿಗೆಲ್ಲ ಬಡಿಸುತ್ತಿದ್ದಳು. ಈಕೆಯ ಪತಿ ಈ ವಿಷಯ ತಿಳಿದೂ ನಿರುಪಾಯನಾಗಿ ಹೆಂಡತಿಯೊಡನೆ ಸಂಸಾರ ಮಾಡುತ್ತಾ ಇದ್ದನು. ಹೀಗೆ ಜೀವನ ಸಾಗಿಸಿ ತಮ್ಮ ತಮ್ಮ ಆಯುಷ್ಯ ಮುಗಿದ ಮೇಲೆ ಸಾವನ್ನಪ್ಪಿದರು. ಸತ್ತ ಮೇಲೆ ತಮ್ಮ ಮಗನ ಮನೆಯಲ್ಲಿಯೇ ಆಕೆಯು ನಾಯಿಯಾಗಿಯೂ, ಆಕೆಯ ಪತಿಯು ಎತ್ತು ಆಗಿಯೂ ಹುಟ್ಟಿದರು. ಆದರೆ ಹಿಂದಿನ ಜನ್ಮದ ಸ್ಮೃತಿ ಅವರಿಗೆ ಇದ್ದಿತು.

ಮಗನ ಮನೆಯಲ್ಲಿ ಆ ದಿನ ತಂದೆಯ ಶ್ರಾದ್ಧ ಇದ್ದ ಕಾರಣ ಸೊಸೆಯು ಅಡಿಗೆ ಮಾಡಿ ನದಿಯಿಂದ ಮಡಿನೀರು ತರಲು ಹೊರಗೆ ಹೋಗಿದ್ದಳು. ಆ ಸಮಯದಲ್ಲಿ ಅಡಿಗೆ ಮನೆಯಲ್ಲಿ ಹಾವು ಬಂದು ತನ್ನ ವಿಷವನ್ನು ಅಡಿಗೆಯಲ್ಲಿ ಬಿಟ್ಟು ಹೋಯಿತು. ಈ ಘಟನೆಯನ್ನು ಮನೆಯಲ್ಲಿ ನಾಯಿಯ ರೂಪದಲ್ಲಿದ್ದ ಆಕೆಯ ಅತ್ತೆಯು ನೋಡಿದಳು. ಇದನ್ನೇ ಈ ದಿನ ಬ್ರಾಹ್ಮಣರಿಗೆ ಊಟಕ್ಕೆ ಬಡಿಸುವದರಿಂದ ದೊಡ್ಡ ಅನಾಹುತ ವಾಗುವದೆಂದು ತಿಳಿದು ಸೊಸೆಯು ನದಿಯಿಂದ ಬಂದು ಅಡಿಗೆ ಮನೆಯಲ್ಲಿ ಇದ್ದಾಗಲೇ ನಾಯಿಯು ಅವಳ ಸಮಕ್ಷಮ ಮಡಿಯಿಂದ ಮಾಡಿದ ಅಡಿಗೆಯಲ್ಲಿ ಬಾಯಿ ಹಾಕಿ ತಿಂದು ಹೋಯಿತು. ಸೊಸೆಯು ಇದನ್ನು ಪ್ರತ್ಯಕ್ಷ ನೋಡಿ ಸಿಟ್ಟಿನಿಂದ ನಾಯಿಯನ್ನು ಚೆನ್ನಾಗಿ ಥಳಿಸಿ ಮಾಡಿದ ಅಡಿಗೆಯನ್ನೆಲ್ಲ ಹೊರಗೆ ಚೆಲ್ಲಿ ಮಡಿಯಿಂದ ಮತ್ತೆ ಬೇರೆ ಅಡಿಗೆ ಮಾಡಿ ಶ್ರಾದ್ಧ ಕರ್ಮವನ್ನು ನೆರವೇರಿಸಿದರು. ಆ ದಿನ ನಾಯಿಗಾಗಲಿ, ಎತ್ತಿಗಾಗಲಿ ಏನೂ ಆಹಾರ ಹಾಕದೆ ಉಪವಾಸ ಹಾಕಿದಳು. ರಾತ್ರಿಯಲ್ಲಿ ನಾಯಿ ಹಾಗೂ ಎತ್ತು (ಹಿಂದಿನ ಜನ್ಮದ ಹೆಂಡತಿ-ಗಂಡ) ಆ ದಿನ ನಡೆದ ವಿಷಯವನ್ನೆಲ್ಲ ಪರಸ್ಪರ ತಿಳಿದುಕೊಂಡು ಮಾತನಾಡುತ್ತ ಉಪವಾಸದಿಂದಲೇ ಇಡೀ ದಿನ ಕಳೆದವು. ಈ ಪಶುಗಳು ಮಾತನಾಡುವ ಭಾಷೆ ಮನೆಯ ಯಜಮಾನನಿಗೆ ತಿಳಿಯುತ್ತಿದ್ದರಿಂದ ಅವರ ಮಾತುಗಳನ್ನು ಕೇಳಿ ಬಹಳ ದುಃಖಿತನಾಗಿ ಸಮೀಪದ ಅರಣ್ಯದಲ್ಲಿ ನದೀ ತೀರದಲ್ಲಿ ವಾಸವಾಗಿದ್ದ ಋಷಿಗಳ ಸಮೀಪಕ್ಕೆ ಹೋಗಿ ಆ ದಿನ ತಮ್ಮ ಮನೆಯಲ್ಲಿ ನಡೆದ ಘಟನೆಯ ವಿವರಗಳನ್ನು ತಿಳಿಸಿ ಮಾರ್ಗದರ್ಶನ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಆಗ ತ್ರಿಕಾಲ ಜ್ಞಾನಿಗಳಾದ ಆ ಋಷಿಗಳು "ಅವನ ತಂದೆ-ತಾಯಿಗಳೇ ಅವರು ಮಾಡಿದ ಪಾಪ ಕರ್ಮದ ನಿಮಿತ್ತ ಈ ಜನ್ಮದಲ್ಲಿ ಆತನ (ಮಗನ) ಮನೆಯಲ್ಲಿ ತಾಯಿಯು ನಾಯಿ ಆಗಿಯೂ, ತಂದೆ ಆದವನು (ಎತ್ತು) ತನ್ನ ಹೆಂಡತಿ ಧರ್ಮವಿರುದ್ಧವಾಗಿ ನಡೆದುಕೊಂಡದ್ದನ್ನು ಸಹನ ಮಾಡಿಕೊಂಡು ಸಂಸಾರ ಮಾಡಿದ್ದರಿಂದ ಎತ್ತು ಆಗಿಯೂ, ಸದ್ಯ ಅವನ ಮನೆಯಲ್ಲಿಯೇ ಜನ್ಮವೆತ್ತಿದ್ದಾರೆಂದು ತಿಳಿಸಿ ಹೇಳಿದರು. ವಿಷಯವನ್ನು ತಿಳಿದ ಆ ಬ್ರಾಹ್ಮಣನು ದುಃಖಿತನಾಗಿ ತನ್ನ ತಂದೆತಾಯಿಗಳಿಂದ ನಡೆದು ಹೋದ ಪಾಪವನ್ನು ಕಳೆದು ಅವರುಗಳಿಗೆ ಪುನಃ ಮನುಷ್ಯ ಜನ್ಮ ಬರುವಂತೆ ಏನು ಮಾಡಬೇಕೆಂದು ಋಷಿಗಳನ್ನು ಬೇಡಿಕೊಂಡನು. ಕೃಪಾಸಮುದ್ರರಾದ ಆ ಋಷಿಯು ಹೇಳಿದ್ದು –

"ತಾಯಿ ನಿಯಮದ ಪ್ರಕಾರ ಮಾಡಬೇಕಾದ ಋಷಿಪಂಚಮಿ ವ್ರತವನ್ನು ಆ ಬ್ರಾಹ್ಮಣನು 8 ವರ್ಷ ಪರ್ಯಂತ ಆಚರಿಸಿ ಯೋಗ್ಯ ರೀತಿಯಿಂದ ಉದ್ಯಾಪನೆ ಮಾಡಿ ಅದರಿಂದ ಬರುವ ಪುಣ್ಯವನ್ನು ತಾಯಿ ಹಾಗೂ ತಂದೆಗಳಿಗೆ ಧಾರೆ ಎರೆದು ಕೊಡಲ್ಪಟ್ಟಲ್ಲಿ ದೇವರು ಅವರು ಮಾಡಿದ ಅಪರಾಧವನ್ನು ಮನ್ನಿಸಿ ತಂದೆ ತಾಯಿಗಳನ್ನು ಪುನಃ ಮಾನವ ಜನ್ಮ ಬರುವಂತೆ ಮಾಡಿ ಅವರಿಂದ ವ್ರತವನ್ನು ಮಾಡಿಸಿ ಸದ್ಗತಿ ಕೊಡುವನು".

ಋಷಿಗಳ ಆಜ್ಞೆಯಂತೆ ಆ ಬ್ರಾಹ್ಮಣನು ಋಷಿಪಂಚಮಿ ವ್ರತವನ್ನು 8 ವರ್ಷ ಆಚರಿಸಿ ಉದ್ಯಾಪನೆ ಮಾಡಿ ಆ ಪುಣ್ಯವನ್ನು ತಂದೆ-ತಾಯಿಗಳಿಗೆ ಧಾರೆ ಎರೆದು ಕೊಟ್ಟಿದ್ದರಿಂದ ಅವರಿಗೆ ಸದ್ಗತಿಯಾಯಿತು.

ಹೀಗೆ ಋಷಿಪಂಚಮಿ ವ್ರತದ ಮಹಾತ್ಮೆಯನ್ನು ತಿಳಿಸುವ ಇತಿಹಾಸವಿದೆ. ಈ ಕಥೆಯಿಂದ ತಿಳಿದುಕೊಳ್ಳುವದೇನೆಂದರೆ ಎಷ್ಟೇ ಕಷ್ಟ ಬಂದರೂ ಮುಟ್ಟಾದಾಗ ಕೂಡಬೇಕು. ಇಲ್ಲವಾದರೆ ಆ ಬ್ರಾಹ್ಮಣರಂತೆ ಎತ್ತು ನಾಯಿ ಆಗಬೇಕಾಗುತ್ತದೆ.

ಅಷ್ಟಮಿ ಗೌರಿ :

ಜೇಷ್ಠಾ ದೇವಿ ಪೂಜೆ : ಭಾದ್ರಪದ ಶು॥ ಅಷ್ಟಮಿ-ನವಮಿ ಹೀಗೆ ಎರಡು ದಿನ ಪೂಜೆ ಮಾಡುವದು ಒಂದು ಕ್ರಮ. ಆಮೇಲೆ 3 ದಿನ ಮಾಡುವವರು ತಿಥಿ ಎಣಿಸದೆ ನಕ್ಷತ್ರಕ್ಕೆ ಮಹತ್ವಕೊಟ್ಟು ಅಂದರೆ ಅನುರಾಧಾ ನಕ್ಷತ್ರದಲ್ಲಿ ಗೌರಿ ಕೂಡಿಸಿ ಜ್ಯೇಷ್ಠಾ ನಕ್ಷತ್ರದಲ್ಲಿ ಪೂಜೆ ಮಾಡಿ ಮೂಲಾ ನಕ್ಷತ್ರದಲ್ಲಿ ದಾರ ಕಟ್ಟಿಕೊಳ್ಳುವರು. ಶ್ರಾವಣಮಾಸದಲ್ಲಿ ಕೂಡಿಸಿದ ಗೌರಿ, (ಭೂದೇವಿ) ಶ್ರಾವಣ ಮಾಸದ ಗೌರಿಯಂತೆ ಶೃಂಗರಿಸಿ ಅದರಲ್ಲಿ ಧಾರ ಹಾಕಿ, ಈ ಗೌರಿಯನ್ನೂ ಕೂಡಿಸಬೇಕು. ತಾವು ಧರಿಸಬೇಕಾದ ದಾರವನ್ನು ತೊಯಿಸಿ (ಅರಿಷಿಣದಿಂದ) ಗೌರಿ ಹೊಟ್ಟೆಯಲ್ಲಿ ಹಾಕಬೇಕು. ದಾರವು 16 ಎಳೆಯಿಂದ ಕೂಡಿದ್ದು ಇರಬೇಕು. ಇಂಥ ಎರಡು ದಾರಗಳನ್ನು ಎಂಟು ಎಳೆಯುಳ್ಳದ್ದು ಒಂದು ದಾರವನ್ನು, 7 ಎಳೆಯುಳ್ಳದ್ದು ಒಂದು ದಾರವನ್ನು ಹಾಗೂ ಐದು ಎಳೆಯುಳ್ಳದ್ದು ಒಂದು ದಾರವನ್ನು ಹಾಕಿಕೊಳ್ಳುವ ನಿಯಮವಿದೆ. ಗಂಡಸ ಮಕ್ಕಳ ಮದುವೆ ಆಗದೆ ಇದ್ದಲ್ಲಿ ಅವರ ಪರವಾಗಿ 8 ಎಳೆಯ ಒಂದು ದಾರವನ್ನೂ ತಾಯಿಯೇ ಧರಿಸಬೇಕು. ಗಂಡು ಮಕ್ಕಳ ಮದುವೆ ಆಗಿದ್ದರೆ ಸೊಸೆ ಹಾಕಿಕೊಳ್ಳಬೇಕು. (ತಾಯಿಯ ಬದಲಾಗಿ). ಹೀಗೆ ಜ್ಯೇಷ್ಠಾ ದೇವಿ ಪೂಜೆ ಮಾಡಿ ದಾರ ಕಟ್ಟಿಕೊಳ್ಳಬೇಕು.

ಇದಕ್ಕೆ ಒಂದು ಇತಿಹಾಸ –

"ಹಿಂದಕ್ಕೆ 'ಶಂಕರಗಂಡ' ಎಂಬ ಹೆಸರಿನವನು ಇರುತ್ತಾನೆ. ಅವನಿಗೆ ರತಿ ಎಂಬ ತಂಗಿ ಇರುತ್ತಾಳೆ. ಆಕೆಗೆ ಪ್ರಾಪ್ತ ವಯಸ್ಸು ಬಂದಿದ್ದರಿಂದ ವರ ಹುಡುಕುವದರಲ್ಲಿ 'ಮನ್ಮಥ' ಎಂಬ ಹೆಸರಿನ ಶ್ರೀಮಂತ ವರನೊಡನೆ ಮದುವೆ ನೆರವೇರಿಸುತ್ತಾನೆ. ತಂಗಿಯನ್ನು ಗಂಡನ ಮನೆಗೆ ಕಳಿಸುವಾಗ ಅಷ್ಟಮಿಗೌರಿ (ಜ್ಯೇಷ್ಠಾದೇವಿ ಪೂಜೆಗೆ) ಹಬ್ಬಕ್ಕೆ ತಂಗಿಯನ್ನು ಕಳಿಸುವಂತೆ ಕರಾರು ಮಾಡುತ್ತಾನೆ. ಅದರಂತೆ ಅವನು ತಂಗಿಯನ್ನು ಕರೆಯಲು ಹೋಗುತ್ತಾನೆ. ಆಗ ತಂಗಿಯ ಗಂಡನು ತನ್ನ ಶ್ರೀಮಂತಿಕೆಯ ಮದದಿಂದ ಜೋಳದ ಅನ್ನವನ್ನೂ ತಿನ್ನಲು ಅವಳಿಗೆ ಆಗುವದಿಲ್ಲವೆಂದು ಹೇಳಿ ಹೆಂಡತಿಯನ್ನು ತವರುಮನೆಗೆ ಕಳಿಸಲು ನಿರಾಕರಿಸುತ್ತಾನೆ. (ಜ್ಯೇಷ್ಠಾದೇವಿಗೆ ಉಳಿದ ಅಡಿಗೆ ಅಲ್ಲದೆ ಜೋಳದ ನುಚ್ಚಿನ

ಆಹಾರವನ್ನು ನೈವೇದ್ಯ ಮಾಡುವದು ಮುಖ್ಯ). ನಿರುಪಾಯನಾಗಿ ತಂಗಿಯನ್ನು ಕರೆಯಲು ಬಂದ ಶಂಕರಗೌಡನು ಊರಿಗೆ ಮರಳಿ ಹೋಗುತ್ತಾನೆ. ಇತ್ತ ಮನ್ಮಥನ ಮನೆಯಲ್ಲಿ ಜ್ಯೇಷ್ಠಾದೇವಿಯ ಪ್ರಸಾದಕ್ಕೆ ತಿರಸ್ಕಾರ ಮಾಡಿದ್ದರಿಂದ ಶ್ರೀಮಂತಿಕೆಯು ನಾಶವಾಗುತ್ತದೆ. ಮಧ್ಯಾಹ್ನ ಊಟಕ್ಕೆ ಅಭಾವವಾಗಿ ಎರಡು ಹೊತ್ತಿನ ಆಹಾರಕ್ಕಾಗಿ ಊರು-ಊರಿಗೆ ಭಿಕ್ಷೆ ಬೇಡಲು ಗಂಡ-ಹೆಂಡತಿಯರಿಬ್ಬರೂ ಹೋಗುತ್ತಾರೆ. ಹೀಗೆ ಊರು ತಿರುಗುವಾಗ 'ಶಂಕರಗೌಡನ ಊರಿಗೆ ಬಂದು ಅವನ ಮನೆಗೆ ಹೋದಾಗ ಅವನಿಗೆ ತನ್ನ ತಂಗಿ ಹಾಗೂ ಗಂಡನ ಸ್ಥಿತಿ ನೋಡಿ ತಾನು ಯಾರೆಂದು ಅವರಿಗೆ ತಿಳಿಸದೆ ತಂಗಿಯ ಗಂಡನು ಅವನ ಮನೆಯ ದನ ಕಾಯುವ ಕೆಲಸ ಮಾಡಿದಲ್ಲಿ ಗಂಡ ಹೆಂಡತಿಗೆ ಎರಡು ಹೊತ್ತು ಬೇಕಾದ ಆಹಾರ ಕೊಡುವದಾಗಿ ಹೇಳುತ್ತಾನೆ. ಆ ಕರಾರಿಗೆ ಒಪ್ಪಿ ತಂಗಿಯ ಗಂಡನು ದನ ಕಾಯುವ ಕೆಲಸವನ್ನು ಮಾಡುವದಲ್ಲದೆ ದನಕ್ಕೆ ಬೇಕಾದ ಹುಲ್ಲು ಕೊಯ್ದು ತಂದು ಹಾಕುವ ಕೆಲಸ ಮಾಡುವಾಗ ಒಂದು ದಿವಸ ಮನ್ಮಥನ ಕೈಗೆ ಹುಲ್ಲು ಕೊಯ್ಯುವಾಗ ರಕ್ತ ಬರುತ್ತದೆ. ಅವನ ಹೆಂಡತಿಯು ಅದನ್ನು ನೋಡಿ ಗಾಬರಿಯಾಗಿ ಅಣ್ಣನಿಗೆ ವಿಷಯ ತಿಳಿಸಿ ತನ್ನ ಗಂಡನ ಅಪರಾಧವನ್ನು ಕ್ಷಮಿಸಿ ಉದ್ಧಾರ ಮಾಡಬೇಕೆಂದು ಕೇಳಿಕೊಳ್ಳುತ್ತಾಳೆ. ಅಣ್ಣನು ಈ ಘಟನೆಯಿಂದ ದುಃಖಪಟ್ಟು, ತಂಗಿ ಹಾಗೂ ತಂಗಿಯ ಗಂಡನನ್ನು ಮನೆಯಲ್ಲಿಟ್ಟುಕೊಂಡು ಉಪಚರಿಸಿ ಮತ್ತೆ ಬರುವ ಗೌರಿ ಹಬ್ಬದಲ್ಲಿ ವಿಶೇಷ ರೀತಿಯಿಂದ ತಂಗಿ-ತಂಗಿಯ ಗಂಡ ಸಹಿತವಾಗಿ ಜ್ಯೇಷ್ಠಾ ದೇವಿಯ ಪೂಜೆಯನ್ನು ವಿಜೃಂಭಣೆಯಿಂದ, ಶ್ರದ್ಧೆ-ಭಕ್ತಿಯಿಂದ ಆಚರಿಸಿ ಅನೇಕ ಪಕ್ವಾನ್ನದ ಜೊತೆಗೆ ಜೋಳದ ನುಚ್ಚನ್ನು ತಯಾರಿಸಿ ಗೌರಿಗೆ ನೈವೇದ್ಯ ಮಾಡಿ ಆ ನೈವೇದ್ಯವನ್ನು ಆದರದಿಂದ ಸ್ವೀಕರಿಸಿ ಗೌರಿದೇವಿ (ಭೂದೇವಿ) ಕೃಪೆಗೆ ಪಾತ್ರರಾಗಿ ಸುಖದಿಂದಿದ್ದರು".

ಈ ಕಥೆಯ ಬಗ್ಗೆ ಅಂದರೆ ಜ್ಯೇಷ್ಠಗೌರಿ ವ್ರತದ ಬಗ್ಗೆ "ಹಳವನಕಟ್ಟಿ ಗಿರಿಯಮ್ಮ"ನಿಂದ ರಚಿತವಾದ ಹಾಡನ್ನು ಈ ಗೌರಿ ಹಬ್ಬದ ದಿವಸ ಹೇಳುವದು ವಾಡಿಕೆ ಆಗಿದೆ.

**ವಾಮನ ದ್ವಾದಶಿ :**

ಭಾದ್ರಪದ ಶು|| ದ್ವಾದಶಿಯಂದು ವಾಮನಾವತಾರ ವಾದ ದಿವಸ. ಇಂದು ಯೋಗ್ಯ ಬ್ರಹ್ಮಚಾರಿಯನ್ನು ಭೋಜನಕ್ಕೆ ಕರೆದು ಸಂತೃಪ್ತಪಡಿಸಬೇಕು. ಮೊಸರಿನ ವ್ರತ ಮುಗಿಯುವದರಿಂದ ಮೊಸರನ್ನು (ಬುತ್ತಿ)ವನ್ನು ಪಂಚೆ, ಚಪ್ಪಲಿ ದಾನವನ್ನು ಕೊಡಬೇಕು.

**ಅನಂತನ ಚತುರ್ದಶಿ :**

ಸಾಮಾನ್ಯವಾಗಿ ಭಾದ್ರಪದ ಶು|| ಚತುರ್ದಶಿ ದಿನ ಒಮ್ಮೆ ತ್ರಯೋದಶಿ ದಿನವೇ ಅನಂತಚತುರ್ದಶಿ ವ್ರತವು ಬರುತ್ತದೆ. ದರ್ಭೆಯಿಂದ ಐದು ಹೆಡೆ ನಾಗಪ್ಪನನ್ನು ತಯಾರಿಸಿ ದೇವರ ಮನೆಯಲ್ಲಿ ಯೋಗ್ಯ ಸ್ಥಳದಲ್ಲಿ ಇಟ್ಟು ಪೂಜೆ ಮಾಡಬೇಕು. ನಾಗಪ್ಪನಿಗೆ (ಅನಂತ

ಪದ್ಮನಾಭನಿಗೆ ಕೇದಿಗೆ ತಂದು ಏರಿಸಲು ಮರೆಯಬಾರದು. ಗೆಜ್ಜೆವಸ್ತ್ರ, ಹೂ, ಅರಶಿಣ-ಕುಂಕುಮ ಏರಿಸಬೇಕು. ಇದಕ್ಕೆ 'ಅನಂತ ಪದ್ಮನಾಭ ಪೂಜೆ' ಎಂದೇ ಕರೆಯುತ್ತಾರೆ. ಅನಂತನ ದಾರಗಳನ್ನು ತಂದು ಅನಂತನಿಗೆ ಏರಿಸಿ ಒಂದು ದಾರವನ್ನು ದಾನ ಕೊಡಬೇಕು. ಮನೆಯಲ್ಲಿಯ ಹಿರಿಯರು ಹೀಗೆ ಪೂಜಿಸಿದ ದಾರವನ್ನು ಕಟ್ಟಿಕೊಳ್ಳಬೇಕು. (ಕೆಲವರು ಕೊರಳಲ್ಲಿ ಹಾಕುವದೂ ಉಂಟು). ಶ್ರದ್ಧೆಯಿಂದ ಪೂಜಿಸಿ ಪಕ್ವಾನ್ನದ ಅಡಿಗೆ ಮಾಡಿ ನೈವೇದ್ಯ ಮಾಡಿ ದಂಪತ್ತು ಭೋಜನ ಮಾಡಿಸಬೇಕು. ಮುತ್ತೈದೆಗೆ ಮರದ ಬಾಗಿಣವನ್ನು ಕೊಡಬೇಕು.

ಈ ವ್ರತದ ಇತಿಹಾಸ –

ಒಂದಕ್ಕೆ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಒಬ್ಬ ಮಗಳಿದ್ದಳು. ಆತನಿಗೆ ಹೆಂಡತಿ ತೀರಿಕೊಂಡಿದ್ದರಿಂದ ಬೇರೆ ಮದುವೆ ಆಗಿದ್ದನು. ಮಲತಾಯಿಯು ಮಗಳಿಗೆ ಬಹಳ ಕಷ್ಟ ಕೊಡುತ್ತಿದ್ದಳು. ತಂದೆಯು ಮಗಳ ಮದುವೆಯನ್ನು ಯೋಗ್ಯ ವಯಸ್ಸಿನಲ್ಲಿ ಮಾಡಿದನು. ಮಗಳು ಗಂಡನ ಮನೆಗೆ ಹೋಗುವ ದಾರಿಯಲ್ಲಿ ಒಂದು ನದಿ ಸಿಕ್ಕಿತು. ಆ ನದಿಯ ದಂಡೆಯಲ್ಲಿ "ಅನಂತಪದ್ಮನಾಭನ ಪೂಜೆ"ಯನ್ನು ಒಳ್ಳೇ ಭಕ್ತಿಯಿಂದ ಮಾಡುವದನ್ನು ಕಂಡಳು. ಕುತೂಹಲದಿಂದ ಪೂಜೆಯನ್ನು ವೀಕ್ಷಿಸಿದಳು. ಅವಳ ಶ್ರದ್ಧೆಗೆ ಪೂಜೆ ನಡೆಸಿದವರು ಅನಂತ ಪದ್ಮನಾಭನಿಗೆ ಏರಿಸಿದ ಒಂದು ದಾರವನ್ನು ಕೊಟ್ಟು ಕೊರಳಲ್ಲಿ ಧರಿಸಬೇಕೆಂದು ಹೇಳಿದರು. ಆ ಪ್ರಕಾರ ಆ ದಾರವನ್ನು ತನ್ನ ಕೊರಳಲ್ಲಿ ಧರಿಸಿಕೊಂಡು ಗಂಡನ ಮನೆ ಸೇರಿದಳು. ಆಕೆಯ ಪತಿಯು ತನ್ನ ಹೆಂಡತಿ ಕೊರಳಲ್ಲಿ ಕಟ್ಟಿಕೊಂಡಿದ್ದ ದಾರವನ್ನು ನೋಡಿ ತಿರಸ್ಕಾರದಿಂದ ಆ ದಾರವನ್ನು ಕೊರಳಿನಿಂದ ಕಿತ್ತು ಅಗ್ನಿಯಲ್ಲಿ ಹಾಕಿದನು. ತಕ್ಷಣ ಆಕೆಯು ಅಗ್ನಿಯಿಂದ ದಾರವನ್ನು ಕಿತ್ತುಕೊಂಡು ಅದು ನಾಶವಾಗ ಬಾರದೆಂದು ಹಾಲು, ತುಪ್ಪ, ಬೆರೆಯಿಸಿ ಅದರಲ್ಲಿ ಇರಿಸಿದಳು. ಈ ಘಟನೆಯಿಂದ ಆಕೆಗೆ ಬಹಳೇ ದುಃಖವಾಯಿತು. ಇದಾದ ಸ್ವಲ್ಪೇ ದಿನದಲ್ಲಿ ಈಕೆಯ ಮನೆಯ ಸಂಪತ್ತೆಲ್ಲಾ ನಾಶವಾಗಿ ಕಡು ಬಡತನ ಪ್ರಾರಂಭವಾಯಿತು. ಈಕೆಯ ಗಂಡನು ತಾನು ಅಪಮಾನ ಮಾಡಿದ ಆ ಪವಿತ್ರ ಅನಂತ ದಾರದಿಂದಲೇ ತನಗೆ ಇಷ್ಟೆಲ್ಲ ದುಃಖ ಪ್ರಾಪ್ತಿ ಆಯಿತೆಂದು ಮನಗಂಡು ಪಶ್ಚಾತ್ತಾಪ ಪಟ್ಟು ಬಲ್ಲವರಿಂದ ಅನಂತ ಪದ್ಮನಾಭನ ಪೂಜೆಯ ವಿಧಾನವನ್ನು ತಿಳಿದು ಈ ಸಲ ವಿಶೇಷ ಭಕ್ತಿ ಶ್ರದ್ಧೆಗಳಿಂದ ಮನೆಯಲ್ಲಿ "ಅನಂತ ಪದ್ಮನಾಭ" ವ್ರತವನ್ನು ಬಂಧುಬಳಗದವರಿಂದ ಕೂಡಿಕೊಂಡು ವಿಜೃಂಭಣೆಯಿಂದ ಆಚರಿಸಿ ತಾನು ಮಾಡಿದ ತಪ್ಪನ್ನು ಮನ್ನಿಸಿ ಉದ್ಧಾರ ಮಾಡಬೇಕೆಂದು ಪರಮಾತ್ಮನನ್ನು ಬೇಡಿಕೊಂಡನು. ದೇವರು (ಅನಂತಪದ್ಮನಾಭನು) ಈತನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅವನು ಮಾಡಿದ ಪಾಪವನ್ನು ಪರಿಹರಿಸಿ ಕಳೆದು ಹೋದ ಸಂಪತ್ತು ಕೊಟ್ಟು ಉದ್ಧಾರ ಮಾಡಿದನು.

## ಭಾಗವತ ಮಂಗಳ (ಪ್ರೋಷ್ಠಪದಿ) :

ಶ್ರೀಮದ್ಭಾಗವತವು ಭಾದ್ರಪದ ಶು|| ನವಮಿ ಪ್ರಾರಂಭವಾಗಿ ಹುಣ್ಣಿಮೆ ವರೆ ನಡೆದು ಹುಣ್ಣಿಮೆದಿನ ಮಂಗಳ ಮಾಡುವದು ನಡೆದುಬಂದ ರೀತಿ. ಇದಕ್ಕೆ ಪ್ರೋಷ್ಠಪದಿ ಅನ್ನುವರು. ದೇಶದ ಎಲ್ಲ ಭಾಗದಲ್ಲಿ ವೈಷ್ಣವ ಸಮಾಜದವರು ಈ ಭಾಗವ ಸಪ್ತಾಹವನ್ನು ಶ್ರದ್ಧೆಯಿಂದ ನಡೆಯಿಸಿಕೊಂಡು ಬರುತ್ತಾರೆ. ಪಾಂಡವರ ಮೊಮ್ಮಗನಾ ಪರೀಕ್ಷಿತ ಮಹಾರಾಜನು ಶಾಪಗ್ರಸ್ತನಾಗಿ ಏಳು ದಿನಗಳಲ್ಲಿ ಮೃತನಾಗುವದ ನಿಶ್ಚಯವೆಂದು ತಿಳಿದು ಒಂದು ವಾರದಲ್ಲಿ ಸಂಪೂರ್ಣ ಭಾಗವತವನ್ನು ಕೇ ಕೃತಾರ್ಥನಾಗಬಹುದೆಂದು ಜ್ಞಾನಿಗಳ ಮಾರ್ಗದರ್ಶನ ಪಡೆದು ಗಂಗಾತೀರಕ್ಕೆ ಬಂದು ಅನ್ನ ನೀರು ತ್ಯಜಿಸಿ ದಿನದ 24 ಘಂಟೆಯಂತೆ ಸಪ್ತಾಹ ಸಂಪೂರ್ಣ ಶ್ರೀಮದ್ಭಾಗವತವನ್ನು ದೈವೇಚ್ಛೆಯಂತೆ ಶ್ರೀ ಶುಕಮಹಾಮುನಿಗಳಿಂದ ಶ್ರವಣ ಮಾಡಿ ಇಹ ಲೋಕವನ್ನು ತ್ಯಜಿ ಮುಕ್ತಿ ಹೊಂದಿದನು. ಈ ಭಾಗವತ ಸಪ್ತಾಹ ನಡೆದದ್ದು ಭಾದ್ರಪದ ಶು|| ನವಮಿಯಿಂದ ಹುಣ್ಣಿಮೆವರೆಗೆಯಾದ್ದರಿಂದ ಪ್ರತಿವರ್ಷವೂ ಅಂದಿನಿಂದ ಈ ಭಾಗವತ ಸಪ್ತಾಹವನ್ನು ವೈಷ್ಣವರು ತಪ್ಪದೇ ಏರ್ಪಡಿಸಿ ಶ್ರೀಮದ್ಭಾಗವತವನ್ನು ಶ್ರವಣ ಮಾಡಿ ಕೃತಾರ್ಥರಾಗು ಸಂಪ್ರದಾಯ ಬಂದಿದೆ.

## ಪಕ್ಷಮಾಸ

ಭಾದ್ರಪದ ಬ॥ ಪ್ರತಿಪದೆಯಿಂದ ಅಮಾವಾಸ್ಯೆ ಪರ್ಯಂತ 15 ದಿನಗಳ ಅವಧಿ ಪಕ್ಷಮಾಸವೆನಿಸಿಕೊಳ್ಳುತ್ತದೆ. ಪಿತೃಋಣದಿಂದ ಮುಕ್ತರಾಗಲು ಪ್ರತಿಯೊಬ್ಬನೂ ಈ ಅವಧಿಯಲ್ಲಿ ಸ್ವರ್ಗಸ್ಥರಾದ ತಂದೆಯ ಋಣಪರಿಹಾರಕ್ಕಾಗಿ ಶ್ರಾದ್ಧವನ್ನು ಮಾಡಬೇಕು. ಸಮಸ್ತ ಪಿತೃಗಳಿಗೆ ಪಿಂಡೋದಕ (ತರ್ಪಣ) ಕೊಡಬೇಕು. ಶ್ರಾದ್ಧವನ್ನು ಪಿಂಡಪ್ರದಾನ (ಚಟಕಶ್ರಾದ್ಧ)ದಿಂದಲೇ ಮಾಡಬೇಕು. ಆ ದಿವಸ ಸತ್ಪಾತ್ರ ಬ್ರಾಹ್ಮಣರನ್ನು ಕರೆದು ಭೂರಿಭೋಜನ ಮಾಡಿಸಿ ಉದಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಸಂತೋಷಗೊಳಿಸಿ, ಬಂಧು ಬಳಗದವರೆಲ್ಲ ಸೇರಿ, ಪಿತೃಶೇಷವನ್ನು ಸೇವಿಸಿ ಕೃತಾರ್ಥರಾಗಬೇಕು. ಕೊನೆಯ ದಿನ ಸರ್ವಪಿತೃ ಅಮಾವಾಸ್ಯೆಯಾಗಿದ್ದು ಮೃತ ತಂದೆಯ ಶ್ರಾದ್ಧವನ್ನು ಆ ಆ ದಿನಗಳಲ್ಲಿಯೇ ಮಾಡಲು ಅನಾನುಕೂಲವಿದ್ದವರು ಈ ದಿನವಂದು ಮಾಡಬೇಕು. ತಿಥಿಗೆ ಅನುಸಾರ ಶ್ರಾದ್ಧ ಮಾಡಿದವರೂ ಸರ್ವಪಿತೃ ಅಮಾವಾಸ್ಯೆ ದಿನ ಮತ್ತೆ ಶ್ರಾದ್ಧ ಮಾಡಿದಲ್ಲಿ ಹೆಚ್ಚಿನ ಪುಣ್ಯ ಲಭಿಸುವದು. (ಇದು ಗಂಡಸರಿಗೆ ಸಂಬಂಧ ವಿಷಯವಾದ್ದರಿಂದ ನಾನು ಹೆಚ್ಚಿಗೆ ಬರೆಯಲು ಅಸಮರ್ಥಳಾಗಿದ್ದೇನೆ).

**ನವರಾತ್ರಿ :**

ಆಶ್ವೀನ ಶು॥ ಪ್ರತಿಪದೆಯಿಂದ ಮಹಾನವಮಿ ದಿನದವರೆಗೆ 9 ದಿನದ ಅವಧಿ ನವರಾತ್ರಿ ಅನಿಸಿಕೊಳ್ಳುತ್ತದೆ. ಪ್ರತಪದೆ ಬೆಳಿಗ್ಗೆ ಅಭ್ಯಂಗಸ್ನಾನ ಮಾಡಿ ಸಂಕಲ್ಪ ಮಾಡಿ ಕಲಶ ಸ್ಥಾಪನೆ ಮಾಡಿಕೊಂಡು ತುಪ್ಪದ ದೀಪ ಹಾಗೂ ಎಣ್ಣೆ ದೀಪಗಳನ್ನು ದೇವರ ಎಡಬಲದಲ್ಲಿ ಸ್ಥಾಪನೆ ಮಾಡಬೇಕು. ದೇವರ ಪೂಜೆ ಮಾಡುವಾಗ ದೀಪಕ್ಕೆ ಗೆಜ್ಜೆವಸ್ತ್ರ, ಅರಿಷಿಣ-ಕುಂಕುಮ ಹಚ್ಚಿ ಪೂಜಿಸಿ ನೈವೇದ್ಯ ಮಾಡಿಕೊಂಡು ಪ್ರತಿಮಾರ್ಜನೆ ಮಾಡಬೇಕು. ಮನೆಯಲ್ಲಿ ದೊಡ್ಡ ದೇವರು ಇರುವವರು ನವರಾತ್ರಿ ದಿನಗಳಲ್ಲಿ ಹಾಗೂ ದಸರೆ ದಿವಸ ಕೂಡ ನಿತ್ಯ ಪ್ರತಿಮಾರ್ಜನೆ ಮಾಡುವದು ಶ್ರೇಯಸ್ಕರ. ಸಾಧ್ಯವಾಗದಿದ್ದಲ್ಲಿ ಒಂದು ದಿನವಾದರೂ ಪ್ರತಿಮಾರ್ಜನೆ ಮಾಡಬೇಕು. ನಿತ್ಯ ಒಂದು ದಂಪತ್ತು ಕರೆದು ಭೋಜನ ಮಾಡಿಸಬೇಕು. ಇದು ದಿನವೂ ದೀಪ ಇಡುವವರು ಪಂಚಮಿಯಿಂದ ಪ್ರಾರಂಭಿಸಬೇಕು. ಪಂಚಮಿ ಸರಸ್ವತೀ ಆವ್ಹಾಹನ ಮಾಡಬೇಕು. ಸಪ್ತಮಿ ಸರಸ್ವತೀ ಪೂಜಾ ನೆರವೇರಿಸಬೇಕು.

ಮೂರು ದಿನ ನವರಾತ್ರಿ ಉತ್ಸವ ಮಾಡುವವರು ಸಪ್ತಮಿ ದಿನವಂದು ದೀಪಗಳನ್ನು ಸ್ಥಾಪಿಸಬೇಕು. ಮರುದಿನವೇ ದುರ್ಗಾಷ್ಟಮಿ. ದುರ್ಗಾದೇವಿ ಪೂಜೆ ಮಾಡಬೇಕು. ಈ ದಿನ ಕ್ಷತ್ರಿಯರಿಗೆ ಮಹತ್ವದ ದಿನವಾಗಿದೆ. ಆಯುಧ ಪೂಜೆಯನ್ನು ಅವಶ್ಯವಾಗಿ ಮಾಡಬೇಕು. ಅದರ ಮರುದಿನ ಮಹಾನವಮಿ ಶಮೀ ಪೂಜಾ ಮಾಡಬೇಕು. ಬನ್ನಿ (ಗಿಡಕ್ಕೆ ಪೂಜಿಸಬೇಕು) ನಂತರ ವಿಜಯದಶಮಿ ಸರಸ್ವತಿ ವಿಸರ್ಜನೆ ಹಾಗೂ ಶ್ರೀ ಮಧ್ವಾಚಾರ್ಯರು ಅವತಾರ

ಮಾಡಿದ ದಿವಸ ಮಧ್ವಜಯಂತಿ ಉತ್ಸವವನ್ನು ಮಾಡಬೇಕು. ಸಾಯಂಕಾಲ ಪರಸ್ಪರರು ಬನ್ನಿ ಕೊಟ್ಟು ಶುಭಚಿಂತನೆ ಮಾಡಬೇಕು. ಹೀಗೆ ನವರಾತ್ರಿಯ ಹಬ್ಬವು 9 ದಿನ ನಡೆದು ವಿಜಯದಶಮಿ. ವಿಶೇಷ ಪೂಜೆಯೊಂದಿಗೆ ಮುಗಿಯುತ್ತದೆ. ಬನ್ನಿ ಕೊಡುವಾಗ "ಶಮೀಯತೇ ಪಾಪಂ ಶಮೀ ಶತ್ರುವಿನಾಶಿನಿ । ಅರ್ಜುನಸ್ಯ ಧನುರ್ಧಾರಿ ರಾಮಸ್ಯ ಪ್ರಿಯದರ್ಶಿನಿ ||" ಈ ಮಂತ್ರ ಹೇಳಿಕೊಂಡು ಮನೆಯಲ್ಲಿ ಹಿರಿಯರಿಗೆ, ಪಂಡಿತರಿಗೆ, ಪೂಜ್ಯರಿಗೆ ಬನ್ನಿ ವಿತರಣೆ ಮಾಡಿ ಅವರಿಂದ ಆಶೀರ್ವಾದ ಪಡೆಯಬೇಕು. ನಿತ್ಯವೂ ವೆಂಕಟೇಶ ಕಲ್ಯಾಣವನ್ನು (ಪುರಾಣ) ಹೇಳಬೇಕು. ಮತ್ತು ಹಾಡನ್ನು ಹೇಳಬೇಕು.

ನವರಾತ್ರಿ ಉತ್ಸವವನ್ನು ತಿರುಪತಿ ಕ್ಷೇತ್ರದಲ್ಲಿ ನೋಡಬೇಕು. ಸ್ವತಃ ಬ್ರಹ್ಮದೇವರೇ ಈ ಉತ್ಸವವನ್ನು ಆಚರಿಸುವರಂತೆ. ಕಾರಣ ಇದಕ್ಕೆ ಬ್ರಹ್ಮೋತ್ಸವವೆಂದೇ ಕರೆಯುತ್ತಾರೆ. 9 ದಿನವಲ್ಲಿ ಪ್ರತಿನಿತ್ಯ ಒಂದೊಂದು ವಾಹನದಲ್ಲಿ ಶ್ರೀ ವೆಂಕಟೇಶ್ವರನನ್ನು ಇಟ್ಟು ಶೃಂಗರಿಸಿ ರಥ ಬೀದಿಯಲ್ಲಿ ಭವ್ಯ ಮೆರವಣಿಗೆಯನ್ನು ನಡೆಸುತ್ತಾರೆ. ನಾನಾ ದೇಶದ ಜನರು ಇದನ್ನು ನೋಡಿ ಆನಂದಿಸಲು ಬರುತ್ತಾರೆ.

ಮೊದಲನೆ ದಿನ (ಪ್ರತಿಪದೆ) 'ವೃಷಭ-ವಾಹನ ದ್ವಿತೀಯಾ ದಿನ ಶೇಷವಾಹನ. ತೃತೀಯಾ ದಿನ ಗರುಡವಾಹನ. ಚತುರ್ಥಿ ದಿನ ಕಲ್ಪವೃಕ್ಷ ಹಿಂದೆ ಮಾಡಿ ಮುಂದೆ ಶ್ರೀನಿವಾಸ ದೇವರಿಗೆ ರತ್ನವೈಡೂರ್ಯಗಳಿಂದ ಶೃಂಗರಿಸಿ, ಬಂಗಾರ ಮಂಟಪದಲ್ಲಿ ಮೆರವಣಿಗೆ, ಪಂಚಮಿ ದಿವಸ ಮೋಹಿನಿ ರೂಪದ ಶ್ರೀನಿವಾಸ, ಷಷ್ಠಿ ದಿವಸ ಮಾರುತಿ ವಾಹನ. ಸಪ್ತಮಿ ದಿನ ಮಹಾರಾಜರ ರೀತಿಯಲ್ಲಿ ಶ್ರೀನಿವಾಸ ದೇವರು. ಅಷ್ಟಮಿ ದಿನ ಬಂಗಾರದ ತೇರಿನಲ್ಲಿ ದೇವರನ್ನಿಟ್ಟು ಎಳೆಯುವದು. ನವಮಿ ದಿವಸ ಬ್ರಹ್ಮರಥೋತ್ಸವ. ಹೀಗೆ ಒಂಭತ್ತು ದಿನಗಳಲ್ಲಿ ಒಂಭತ್ತು ತರಹದ ಉತ್ಸವಗಳು ನೆರವೇರುತ್ತವೆ. ಉತ್ಸವದಲ್ಲಿ ಪಟ್ಟದ ಆನೆಗಳು ಚೌರಿ ಬೀಸುವರು. ದಾಸಕೂಟಗಳಿಂದ ಸಂಕೀರ್ತನೆ ವಿದ್ವಜ್ಜನರಿಂದ ವೇದಘೋಷ, ಹೆಜ್ಜೆ ಹೆಜ್ಜೆಗೆ ಆರತಿ ಬೆಳಗುವದು. ನೃತ್ಯೋತ್ಸವ ನಗಾರಿ-ನೌಬತ್ತು, ಒಂದೇ ಎರಡೇ ಈ ಉತ್ಸವವನ್ನು ನೋಡಲು ಎರಡು ಕಣ್ಣು ಸಾಲವೆಂದೇ ಹೇಳಬೇಕು. ಮನುಷ್ಯನಾಗಿ ಹುಟ್ಟಿದವನು ಸಾಯುವದರಲ್ಲಿ ಒಂದು ಸಲವಾದರೂ ತಿರುಪತಿ ಕ್ಷೇತ್ರದಲ್ಲಿ ನಡೆಯುವ ನವರಾತ್ರ್ಯೋತ್ಸವವನ್ನು ನೋಡಿ ಕೃತಾರ್ಥರಾಗಬೇಕು.

ಆಶ್ವಿನ ಶು|| ದ್ವಾದಶಿ ಶೀಗಿ ಗೌರಿ ಪೂಜೆ ಪೂಜಿಸಬೇಕು. ಈ ಪೂಜೆಯನ್ನು ದ್ವಾದಶಿಯಿಂದ ಹುಣ್ಣಿಮೆವರೆಗೆ ಆಚರಿಸಬೇಕು ಹೊಸ ಫಲವಾದ ಧಾನ್ಯ-ದವಸ ಮನೆಗೆ ಬರುವದರಿಂದ ಅರ್ಥಾತ್ 'ಸಿರಿ' ಬರುವದರಿಂದ 'ಸಿರಿ' ರೂಪವಾದ ಗೌರಿಯನ್ನು ಉತ್ಸವದಿಂದ ಆಚರಿಸಬೇಕು. ಸಾಯಂಕಾಲ ಹಣ್ಣಿನಿಂದ ಇಲ್ಲದೆ ಕೊಬ್ಬರಿ-ಬೆಲ್ಲದಿಂದ ಆರತಿ ಮಾಡಬೇಕು.

ಆಶ್ವಿನ ಶು|| ತ್ರಯೋದಶಿ ಕೋಜಾಗರಿ ವ್ರತವನ್ನು ಮಾಡಬೇಕು. ಹುಣ್ಣಿಮೆ (ಶೀಗಿ ಹುಣ್ಣಿಮೆ) ದಿನದಿಂದ ಕಾರ್ತಿಕ ಸ್ನಾನ ಆರಂಭ ಮಾಡಬೇಕು ಹಾಗೂ ನಕ್ಷತ್ರ ಇರುವಾಗ

ಸ್ನಾನ ಮಾಡಿ ಕೃತ್ತಿಕಾ ನಕ್ಷತ್ರಕ್ಕೆ ದೀಪ ಹಚ್ಚಬೇಕು. ಬತ್ತಿಯನ್ನು ಐದು ಕುಸುರು ಮಾಡಿ ಹಚ್ಚಬೇಕು. ಈಗ ದೀಪದ ಮಹತ್ವ ಬಹಳವಿದೆ.

**ದೀಪಾವಳಿ :**

ಈ ಹಬ್ಬವು ಆಶ್ವಿನ ಬ|| ತ್ರಯೋದಶಿಯಿಂದ (ಜಲಪೂರ್ಣ ತ್ರಯೋದಶಿ) ಪ್ರಾರಂಭ. ಆ ದಿನ ಸಾಯಂಕಾಲ 'ಗಂಗೆ' ಪೂಜೆ ಮಾಡಬೇಕು. ಕಾಶಿಕ್ಷೇತ್ರ, ಅಲಹಾಬಾದ ಕ್ಷೇತ್ರಗಳಲ್ಲಿ 'ಗಂಗಾ' ಪೂಜೆ ಸಾರ್ವಜನಿಕವಾಗಿ ಬಹು ವಿಜೃಂಭಣೆಯಿಂದ ನಡೆಯುತ್ತದೆ. ಮನೆಯಲ್ಲಿ ಬಚ್ಚಲು ಮನೆಯಲ್ಲಿದ್ದ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಶುದ್ಧವಾದ ನೀರು ತುಂಬಿ, ಮಹಾಲಿಂಗನ ಬಳ್ಳಿ, ಗೆಜ್ಜೆವಸ್ತ್ರ, ಅರಿಷಿಣ-ಕುಂಕುಮ ಏರಿಸಿ ಗಂಗಾ ಸ್ಮರಣೆ ಮಾಡುತ್ತ ಆರತಿ ಮಾಡಬೇಕು. ಮಡಿಯಿಂದ ಅಡಿಗೆ ಮಾಡಿ ದೇವರಿಗೆ ನಂತರ ತಾರತಮ್ಯದಂತೆ ಗಂಗಾ ದೇವಿಗೆ ನೈವೇದ್ಯ ಮಾಡಿ ಊಟ ಮಾಡಬೇಕು. ಈ ದಿನ ಅಡಿಗೆಯಲ್ಲಿ ಶಾವಿಗೆ ಪಾಯಸ ಮಾಡುವದು ಸಂಪ್ರದಾಯವಾಗಿದೆ.

**ಮರುದಿನ ನರಕಚತುರ್ಥಿ:** ಶ್ರೀ ಕೃಷ್ಣನು ನರಕಾಸುರನನ್ನು ವಧೆ ಮಾಡಿ ಬಂಧನದಲ್ಲಿಟ್ಟಿದ್ದ 16,000 ಸ್ತ್ರೀಯರನ್ನು ಬಂಧ ಮುಕ್ತರನ್ನಾಗಿ ಮಾಡಿ ಮನೆಗೆ ಬರುತ್ತಾನೆ. ರುಕ್ಮಿಣಿಯು ಆನಂದದಿಂದ ಶ್ರೀ ಕೃಷ್ಣನಿಗೆ ಆರತಿ ಮಾಡಿ ಸುವಾಸನೆ ಎಣ್ಣೆ ಹಚ್ಚಿ, ಸ್ನಾನ ಮಾಡಿಸಿ ಆರತಿ ಮಾಡುತ್ತಾಳೆ. ಅಂದಿನಿಂದ ನರಕಚತುರ್ದಶಿ ದಿವಸ ದೇಶದಲ್ಲೆಲ್ಲರ ಮನೆಯಲ್ಲಿ ಅರುಣೋದಯದಲ್ಲಿ ಎಲ್ಲರೂ ಆರತಿ ಮಾಡಿಸಿಕೊಂಡು ಎಣ್ಣೆ ಹಚ್ಚಿಕೊಂಡು ಬಿಸಿ ನೀರಿನಿಂದ ಸ್ನಾನ ಮಾಡುವದು, ದೇವರಿಗೆ, ಗುರುಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಮಧ್ಯಾಹ್ನ ದೇವರಿಗೆ ವಿಶೇಷ ಪೂಜೆ ಸಲ್ಲಿಸಿ ವಿಶೇಷ ಪಕ್ವಾನ್ನ ಮಾಡಿ ನೈವೇದ್ಯ ಮಾಡಿ ತೀರ್ಥಪ್ರಸಾದ ತೆಗೆದುಕೊಳ್ಳಬೇಕು. ಎಣ್ಣೆ ಹಚ್ಚುವಾಗ "ಅಶ್ವತ್ಥಾಮ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ । ಕೃಪಃ ಪರಶುರಾಮಶ್ಚ ಸಪ್ತೈತೆ ಚಿರಜೀವನಃ ||" ಅಂತಾ ಮಂತ್ರ ಪಠಿಸುತ್ತ ವೀಳೆದೆಲೆಯನ್ನು 7 ತುಂಡು ಮಾಡಿ ಸುವಾಸನೆಯಲ್ಲಿ ಅದ್ದಿ ಬಂಗಾರದ ಉಂಗುರದಿಂದ ನೆತ್ತಿಗೆ ಹಚ್ಚಬೇಕು. ಈ ಮುಹೂರ್ತದಲ್ಲಿ ಎಣ್ಣೆಯಲ್ಲಿ ಲಕ್ಷ್ಮೀದೇವಿಯು ಸನ್ನಿಧಾನವಿರುವದರಿಂದ ಸನ್ಯಾಸಿಗಳೂ ಇಂದು ಎಣ್ಣೆ ಹಚ್ಚಿಕೊಂಡು ಬಿಸಿ ನೀರಿನ ಸ್ನಾನ ಮಾಡಬೇಕೆಂಬ ನಿಯಮವಿದೆ.

**ಮರುದಿನ ಅಮವಾಸ್ಯ :** ದೀಪಾವಳಿ ಅಮಾವಾಸ್ಯೆ ಎಂದು ಹೇಳುವದು ಪದ್ಧತಿಯಾಗಿದೆ. ವ್ಯಾಪಾರಸ್ಥರಿಗೆ ಇದೊಂದು ವಿಶೇಷವಾದ ಹಬ್ಬ. ತಮ್ಮ ತಮ್ಮ ಅಂಗಡಿಗಳನ್ನು ಶೃಂಗರಿಸಿ ಲಕ್ಷ್ಮೀ ಪೂಜೆ ಮಾಡಿ ಅಂಗಡಿಗೆ ಬಂದವರಿಗೆಲ್ಲಾ ಸತ್ಕಾರ ಮಾಡುತ್ತಾರೆ. ಪ್ರತಿ ಮನೆಗಳಲ್ಲಿಯೂ ಲಕ್ಷ್ಮೀ ಪೂಜೆ ನಡೆಯುತ್ತದೆ. ಅಲ್ಲದೆ ಸಂಜೆಯು ಮುಂದೆ ಎಲ್ಲ ಸ್ಥಳದಲ್ಲಿ ದೀಪ ಹಚ್ಚಿಡಬೇಕು. ಮರುದಿನ ಬಲಿಪಾಡ್ಯ, ಅಂದೂ ಎಲ್ಲ ಕಡೆಯಲ್ಲಿ ದೀಪ ಹಚ್ಚಿಡಬೇಕು.

# ಕಾರ್ತಿಕ ಮಾಸ

## ಕಾರ್ತಿಕ ಶುದ್ಧ ಪ್ರತಿಪದೆ (ಬಲಿಪಾಡ್ಯ) :

ವಾಮನ ರೂಪಿ ಪರಮಾತ್ಮನು ಅವತರಿಸಿ ಬಲಿಚಕ್ರವರ್ತಿಯನ್ನು ತುಳಿದು ಪಾತಾಳಕ್ಕೆ ಕಳಿಸಿದ ದಿನ. ರುಕ್ಮಿಣಿಯು ಪರಮಾತ್ಮನಿಗೆ ಸ್ನಾನಗೃಹದಲ್ಲಿ ಸ್ನಾನಾನಂತರ ಆರತಿ ಮಾಡುತ್ತಾಳೆ. ಅದರಂತೆ ಇಂದಿಗೂ ಪ್ರತಿಗೃಹದಲ್ಲಿಯೂ ಗಂಡಸರು ಸ್ನಾನ ಮಾಡಿದ ನಂತರ ಸ್ನಾನಗೃಹದಲ್ಲಿ ಹೆಣ್ಣು ಮಕ್ಕಳು ಆರತಿ ಮಾಡುವದು ಕಂಡುಬರುತ್ತದೆ. ಅಂದು ಆಕಳು ಶಗಣಿಯಿಂದ 5 ಕುಂತಿಗಳನ್ನು ಮಾಡಿ ಪಂಚಪಾಂಡವರನ್ನು ಆವಾಹನೆ ಮಾಡಿ ಪೂಜಿಸಬೇಕು. ಪಾಂಡವರ ಅಜ್ಞಾತವಾಸ ಮುಗಿದ ದಿವಸವಾದ್ದರಿಂದ ಅದರ ನೆನಪಿಗಾಗಿ ಹೀಗೆ ಪಾಂಡವರನ್ನು ಪೂಜಿಸಬೇಕು. ಮರುದಿನ ಭಾವ ಬಿದಿಗೆ ಅಕ್ಕ ತಂಗಿಯರು ಸಹೋದರರನ್ನು ಕರೆದು ಪ್ರೀತಿಯಿಂದ ಭೋಜನ ಮಾಡಿಸಬೇಕು. ಮತ್ತು ಉಡುಗೊರೆ ಕೊಡಬೇಕು. ಯಮದ್ವಿತೀಯಾ ಅಂತಲೂ ಇದಕ್ಕೆ ಹೆಸರು. ಯಮ ದೇವರನ್ನು ತಂಗಿಯು ಕರೆದು ಹೀಗೆ ಸತ್ಕಾರ ಮಾಡಿದ್ದು ಪುರಾಣದಲ್ಲಿ ಹೇಳಿದೆ. ಅದರ ಮರುದಿನ ಅಕ್ಕನ ತದಿಗೆ. ಅಣ್ಣತಮ್ಮಂದಿರು ಸಹೋದರಿಯನ್ನು ಮನೆಗೆ ಕರೆದು ಮರ್ಯಾದೆ ಮಾಡಬೇಕು. ಪಾಂಡವರು ಪಗಡಿ ಆಡಿ ಸೋತು ಕಷ್ಟ ಅನುಭವಿಸಿ ನಂತರ ಪಗಡಿ ಆಟದಲ್ಲಿ ಗೆದ್ದು ಶ್ರೀ ಕೃಷ್ಣನ ದಯದಿಂದ ಕಳೆದ ರಾಜ್ಯವನ್ನು ದೊರಕಿಸಿಕೊಂಡು ರಾಜ್ಯವಾಳಿದ್ದುದರಿಂದ ಅದರ ನೆನಪಿಗಾಗಿ ಸಂತೋಷದ ದ್ಯೋತಕವಾಗಿ ಈಗಲೂ ಈ ಹಬ್ಬದಲ್ಲಿ ಎಲ್ಲರೂ ಪಗಡಿ ಆಡಿ ಸಂತೋಷ ಪಡುವದು ಒಂದು ರೂಢಿಯಾಗಿದೆ. ಈ ಹಬ್ಬದಲ್ಲಿ ಅದೇ ಮದುವೆ ಆದ ಮಗಳು-ಅಳಿಯನನ್ನು ಹಾಗೂ ಬೀಗರನ್ನು ಕರೆದು 4-5 ದಿವಸ ದೀಪಾವಳಿ ಹಬ್ಬದಲ್ಲಿ ತರತರಹದ ಅಡಿಗೆ ಮಾಡಿ ಉಣಬಡಿಸುವದಲ್ಲದೆ ಮಗಳಿಗೆ, ಅಳಿಯನಿಗೆ, ಬೀಗರಿಗೆ ವಸ್ತ್ರ-ಅಲಂಕಾರ ಕೊಟ್ಟು ಸಂತೋಷಗೊಳಿಸಿ ತಾವೂ ಸಂತೋಷಪಡುವದು ಹಿಂದಿನಿಂದ ನಡೆದು ಬಂದಿದೆ. ಈ ದೀಪಾವಳಿ ಹಬ್ಬವು ಸಕಲರೂ ತಮ್ಮ ಕಷ್ಟವನ್ನು ಮರೆತು ಸಂತೋಷಪಡಲು ಒಂದು ಸುಯೋಗವಾಗಿದೆ.

## ಕಾರ್ತಿಕಸ್ನಾನ :

ಆಶ್ವಿನ ಮಾಸದ ಹುಣ್ಣಿಮೆ (ಸೀಗಿ ಹುಣ್ಣಿಮೆ)ಯಿಂದ ಕಾರ್ತಿಕಮಾಸದ ಹುಣ್ಣಿಮೆ (ಗೌರಿ ಹುಣ್ಣಿಮೆ) ಪ್ರತಿದಿನ ಉಷಃಕಾಲದಲ್ಲಿ ಸ್ನಾನ ಮಾಡಿ ನಕ್ಷತ್ರ ದೀಪ, ಆಕಾಶದೀಪ ಹಚ್ಚಬೇಕು. ಹಾಗೆಯೇ ತುಲಸೀ ಕಟ್ಟೆಯ ಮುಂದೆ ದೀಪ ಹಚ್ಚಿಡಬೇಕು. ಆಶ್ವಿನ ಬ|| ತ್ರಯೋದಶಿ ಯಮಧರ್ಮನ ಪ್ರೀತ್ಯರ್ಥ ಸಂಜೆಯ ಮುಂದೆ ದಕ್ಷಿಣ ದಿಕ್ಕಿನಲ್ಲಿ ದೀಪ ಹಚ್ಚಿಡಬೇಕು. ಆಗ್ಗೆ ಈ ಮಂತ್ರ ಹೇಳಬೇಕು. "ಮೃತ್ಯುಪಾಶಧರಃ, ಕೃಷ್ಣಃ, ಕಾಲದಂಡ ಧರೋಮಹಾನ್ ತ್ರಷ್ಯಸ್ತು ದೀಪದಾನೇನ ತ್ರಯೋದಶ್ಯಾಂ ಸಧರ್ಮರಾಡ್".

ಉತ್ಥಾನ ದ್ವಾದಶಿ :

ಕಾರ್ತಿಕ ಶು|| ದ್ವಾದಶಿ, ತುಲಸೀ-ದಾಮೋದರ ವಿವಾಹವನ್ನು ವಿಜೃಂಭಣೆಯಿಂದ ಮಾಡಬೇಕು. ಅಂದು ಚಾತುರ್ಮಾಸದ ವ್ರತ ಸಮಾಪ್ತಿ ಹಾಗೂ ತುಲಸೀ ವಿವಾಹವಾದ್ದರಿಂದ ಬೆಳಿಗ್ಗೆ ಅಡಿಗೆಯಲ್ಲಿ ವಿವಿಧ ಪಕ್ವಾನ್ನ ಇಚ್ಛಿತ ಕಾಯಿಪಲ್ಲೆ ಮಾಡಿ, ಅನ್ನ, ಸಂಡಿಗೆ, ಹಾಲು-ಮೊಸರು, ಎಲ್ಲ ಹಣ್ಣು-ಹಂಪಲಗಳನ್ನು ದೇವರ ನೈವೇದ್ಯಕ್ಕೆ ಅಣಿ ಮಾಡಿ ತುಲಸೀ ಪೂಜೆ ಮಾಡಿ ದಂಪತ್ತು ಭೋಜನ ಮಾಡಿಸಬೇಕು. ಸಾಯಂಕಾಲ ತುಲಸೀ ಕಟ್ಟೆಯನ್ನು ಶೃಂಗರಿಸಿ ಮಡಿಯಿಂದ ವಿವಿಧ ಫಲಹಾರವನ್ನು ತಯಾರಿಸಿ ಶಾಸ್ತ್ರೋಕ್ತವಾಗಿ ತುಲಸೀ-ದಾಮೋದರ, ವಿವಾಹವನ್ನು ನೆರವೇರಿಸಬೇಕು. ಮದುವೆ ಸಮಯದಲ್ಲಿ ತುಲಸೀ ಗಿಡದಲ್ಲಿ ನೆಲ್ಲಿ ಟೊಂಗೆ ಇಡಬೇಕು. ನಂತರ ತಯಾರಿಸಿದ ಫಲಹಾರವನ್ನು ನೈವೇದ್ಯ ಮಾಡಿ ಬ್ರಾಹ್ಮಣರಿಗೆ ಫಲಹಾರ ದಕ್ಷಿಣೆ ಕೊಡಬೇಕು. ಅಲ್ಲದೆ ಮದುವೆಗೆ ಬಂದವರಿಗೆಲ್ಲ ಪ್ರಸಾದ ಕೊಡಬೇಕು. (ಸಮುದ್ರಮಥನ ಕಾಲದಲ್ಲಿ ಅಮೃತಕಲಶ ಉದ್ಭವವಾದಾಗ ಶ್ರೀ ಕೃಷ್ಣ ಪರಮಾತ್ಮನ ಆನಂದ ಭಾಷ್ಪಗಳು ಅಮೃತದಲ್ಲಿ ಸೇರಿದ್ದರಿಂದ ತುಲಸೀ ಉತ್ಪನ್ನವಾಗುತ್ತದೆ. ಉತ್ಥಾನ ದ್ವಾದಶಿ ದಿನವೇ ಈ ಘಟನೆ ನಡೆದುದಲ್ಲದೆ ತುಲಸೀ-ದಾಮೋದರ (ಕೃಷ್ಣ) ಮದುವೆ ಕೂಡಾ ಉತ್ಥಾನ ದ್ವಾದಶಿ ದಿವಸ ನಡೆಯುತ್ತದೆ).

ಆ ದಿನ ಶಿವ-ಪಾರ್ವತಿಯ ಮೂರ್ತಿಗಳನ್ನು ಇಟ್ಟು ಹುಣ್ಣಿಮೆವರೆಗೆ ನಿತ್ಯ ಸಕ್ಕರೆ ಅಕ್ಕಿನ ಆರತಿ ಹಾಗೂ ಹಣ್ಣಿನ ಆರತಿ ಮಾಡಬೇಕು.

ಕಾರ್ತಿಕ ಶು|| (ವೈಕುಂಠ) ಚತುರ್ದಶಿ ದಿವಸ. ಆ ದಿನ ನೆಲ್ಲಿಗಿಡದ ಆಶ್ರಯದಲ್ಲಿ ಹೋಮ-ಹವನ ಮಾಡಿ ನೆಲ್ಲೀಗಿಡದ ಪೂಜೆಯನ್ನು ಮಾಡಿ ಬ್ರಾಹ್ಮಣ ಸುವಾಸಿನಿಯರನ್ನು, ಬಂಧು ಬಳಗದವರನ್ನು ಕರೆದು ಊಟಕ್ಕೆ ಹಾಕಿ ತಾವು ತೀರ್ಥ ಪ್ರಸಾದ ಸ್ವೀಕರಿಸಬೇಕು.. ಈ ತರಹ ವನ ಭೋಜನ ನೆಲ್ಲೀಗಿಡದ ಸಾನಿಧ್ಯದಲ್ಲಿ ಮಾಡುವದರಿಂದ ಇಡೀ ವರ್ಷದಲ್ಲಿ ಅಶುದ್ಧ ಅನ್ನವನ್ನು ಭುಂಜಿಸಿದ ಪಾಪದಿಂದ ವಿಮುಕ್ತರಾಗುವರಾಗಿ ತಿಳಿಯುತ್ತದೆ. (ಬ್ರಹ್ಮದೇವರ ಆನಂದ ಭಾಷ್ಪಗಳಿಂದ ಈ ನೆಲ್ಲೀಗಿಡದ ಉತ್ಪತ್ತಿಯಾದ್ದರಿಂದ ನೆಲ್ಲೀಗಿಡಕ್ಕೆ ಇಷ್ಟು ಪಾವಿತ್ರ್ಯತೆ ಬಂದಿದೆ).

# ಮಾರ್ಗಶೀರ್ಷ ಮಾಸ

ಸೂರ್ಯನು ಒಂದೊಂದು ತಿಂಗಳು ಒಂದೊಂದು ರಾಶಿಯಲ್ಲಿ ಸಂಚರಿಸುವ ನಿಯಮವಿದ್ದು ಈ ಮಾರ್ಗಶೀರ್ಷ ಮಾಸದಲ್ಲಿ ಧನು ರಾಶಿಯಲ್ಲಿ ಬರುವದರಿಂದ ಇದಕ್ಕೆ ಧನುರ್ಮಾಸವೆಂದು ಹೆಸರು. ಚಳಿ ಬಹಳವಿರುತ್ತದೆ. ದೇವತೆಗಳಿಗೆ ಇದು ಉಷಃ ಕಾಲವಾಗಿದ್ದು ಪರಮಾತ್ಮನಿಗೆ ಹುಗ್ಗಿ ಮಾಡಿ ನೈವೇದ್ಯ ಮಾಡುತ್ತಾರೆ. ಹಾಗೆಯೇ ನಾವು ಕೂಡ ಉಷಃಕಾಲದಲ್ಲಿಯೇ ಸ್ನಾನ ಮಾಡಿ ಸ್ನಾನ ಸಂಧ್ಯಾ, ದೇವರ ಪೂಜೆ ಮಾಡಿ ದೇವರಿಗೆ ಹುಗ್ಗಿ ನೈವೇದ್ಯ ಮಾಡಬೇಕು. ಇದರಿಂದ ದೇವತೆಗಳಿಗೂ ಅವರ ಮುಖಾಂತರ ಪರಮಾತ್ಮನಿಗೂ ಸಂತೋಷವಾಗುತ್ತದೆ. ಧರ್ಮಾತ್ಮರಾದ ಪಾಂಡವರು ಧನುರ್ಮಾಸದಲ್ಲಿ ಶ್ರೀ ಕೃಷ್ಣ ಪರಮಾತ್ಮನನ್ನು ಬರಮಾಡಿಕೊಂಡು ಪೂಜಿಸಿ ಅನೇಕ ಪಕ್ವಾನ್ನ ಮಾಡುವದಲ್ಲದೆ ಮುಖ್ಯವಾಗಿ 'ಹುಗ್ಗಿ' ಗೊಜ್ಜು ಮಾಡಿ ಆತನಿಗೆ ಸಮರ್ಪಿಸಿ ಉಡುಗೊರೆ ಕೊಟ್ಟು ಧನ್ಯರಾಗಿದ್ದಾರೆ. ಇದನ್ನು ತಿಳಿಸಿಕೊಡುವ ಪುರಂದರದಾಸರು ಮಾಡಿದ ಪದವನ್ನು ಉದಯ ಕಾಲದಲ್ಲಿ ಪಠಿಸುವದರಿಂದ ವಿಶೇಷ ಪುಣ್ಯವಿದೆ. (ನನ್ನ ನಿತ್ಯ ಸಾಧನಾ ದರ್ಶನ ಪುಸ್ತಕದಲ್ಲಿ ಈ ಹಾಡನ್ನು ನೋಡಬಹುದು).

ಧನುರ್ಮಾಸದಲ್ಲಿ ಚಳಿ ವಿಶೇಷವಾಗಿದ್ದುದರಿಂದ ಮೈಯಲ್ಲಿ ಚಳಿ ತುಂಬಿರುತ್ತದೆ. ಈ ನಿಮಿತ್ತ ಹೆಸರು ಬೇಳೆ, ಜೀರಿಗೆ, ಮೆಂತೆ, ಇಂಗು, ಒಣಕೊಬ್ಬರಿಯಿಂದ ಕೂಡಿದ ಮತ್ತು ವಿಶೇಷ ತುಪ್ಪ ಬೆರೆಸುವದರಿಂದ ಬಿಸಿ ಬಿಸಿಯಾದ ಹುಗ್ಗಿಯನ್ನು ಬೆಳಿಗ್ಗೆ ತಿನ್ನುವದರಿಂದ ಇಡೀ ದಿನ ಮೈಯಲ್ಲಿಯ ಚಳಿ ಬಿಟ್ಟು ಮನುಷ್ಯನಿಗೆ ಕೆಲಸ ಮಾಡಲು ಉತ್ತೇಜನ ಬರುತ್ತದೆ.

ನಮ್ಮ ಧಾರ್ಮಿಕ ಕರ್ಮಗಳು ನಮಗೆ ಧರ್ಮದಲ್ಲಿ ನಡೆಯುವದನ್ನು ಹೇಳಿ ಕೊಡುವದರ ಜೊತೆಗೆ ಆರೋಗ್ಯವಂತರಾಗಲೂ ಕಲಿಸಿಕೊಡುತ್ತದೆ.

**ಹೊಸ್ತಿಲ ಹುಣ್ಣಿಮೆ :**

ಮಾರ್ಗಶೀರ್ಷದ ಹುಣ್ಣಿಮೆಯೇ ಹೊಸ್ತಿಲ ಹುಣ್ಣಿಮೆ ಆಗಿದೆ. ಈ ದಿನ ಮಾಧ್ವಸಂಪ್ರದಾಯದ ಮಠಗಳಲ್ಲಿ ಶ್ರೀ ರಾಮದೇವರಿಗೆ ಸಹಸ್ರ ಶಂಖಾಭಿಷೇಕ ನಡೆಯುತ್ತದೆ. ಅಲ್ಲದೆ ಮಣ್ಣೂರ ಕ್ಷೇತ್ರದಲ್ಲಿ ಶ್ರೀ ಚೆನ್ನಕೇಶವ ರಥೋತ್ಸವ, ಮೋತಂಪಲ್ಲೀ ಕ್ಷೇತ್ರದಲ್ಲಿ ಶ್ರೀ ಭೀಮಸೇನ ರಥೋತ್ಸವ ನಡೆಯುತ್ತದೆ. ಅಲ್ಲದೆ ಮನೆ ಮನೆಗಳಲ್ಲೂ ದೇವರಿಗೆ ಕ್ಷೀರಾಭಿಷೇಕ ಮಾಡುವದು ಕಂಡು ಬರುತ್ತದೆ.

# ಪುಷ್ಯ ಮಾಸ

ಈ ತಿಂಗಳು ಶುಕ್ಲಪಕ್ಷದಲ್ಲಿ ಭೋಗಿ, (ಅಂದು ಧನುರ್ಮಾಸ ಸಮಾಪ್ತಿ). ಮರುದಿನವೇ ಉತ್ತರಾಯಣ ಪುಣ್ಯಕಾಲ ಪ್ರಾರಂಭ. (ಜನೇವರಿ 14ನೇ ತಾರೀಖು ಉತ್ತರಾಯಣ ಕಾಲ ಪ್ರಾರಂಭವಾಗುವದು ಸಾಮಾನ್ಯ ನಿಯಮವಾದರೂ ಒಂದೊಂದು ಸಲ ಒಂದೊಂದು ದಿನ ಹೆಚ್ಚು-ಕಮ್ಮಿ ಬರುತ್ತದೆ). ಭೋಗಿ ದಿನ ಭೋಗಿ ದಾನ ಕೊಡಬೇಕು. ಅಂದರೆ ಮುತ್ತೈದೆಯನ್ನು ಕರೆದು ಕಾಲುಗಳಿಗೆ ಅರಿಷಿಣ ಹಚ್ಚಿ ಬಿಸಿ ನೀರಿನಿಂದ ತೊಳೆದು ಮಣೆ ಹಾಕಿ ಕೂರಿಸಿ ಮುತ್ತೈದೆಯ ತಲೆಕೂದಲು ಹಿಕ್ಕಿ, ಕಾಡಿಗೆ ಹಚ್ಚಿ ಕೆಳಗೆ ಬರೆದ ಪದಾರ್ಥಗಳನ್ನು ದಾನವಾಗಿ ಕೊಡಬೇಕು.

ಪದಾರ್ಥಗಳು : ಅಕ್ಕಿ, ಹೆಸರುಬೇಳೆ, ಶೆಚ್ಚೆಹಿಟ್ಟು, ಹಸಿ ಕಡ್ಲಿ, ಅವರೇಕಾಯಿ, ಬೆಲ್ಲ, ಎಣ್ಣೆ, ಬೆಣ್ಣೆ, ತುಪ್ಪ, ಜೀರಿಗೆ, ಲವಂಗ, ಮೆಣಸು, ಇಂಗು, ಒಣಕೊಪ್ರಿ, ಹೂ, ಎಲೆಅಡಿಕೆ, ದಕ್ಷಿಣೆ ಹಾಗೂ ಎರೆದುಕೊಳ್ಳಲು ಕೊಪ್ರಿ ಎಣ್ಣೆ, ಶೀಗಕಾಯಿ ಹೀಗೆ ಪದಾರ್ಥಗಳನ್ನೆಲ್ಲ ಒಂದು ಮರದಲ್ಲಿ ಇಟ್ಟುಕೊಡಬೇಕು.

**ಮಕರಸಂಕ್ರಮಣ :**

ಉತ್ತರಾಯಣ ಪುಣ್ಯ ಕಾಲದ ಪ್ರಾರಂಭದ ದಿನ. ಪಂಚಾಂಗದಲ್ಲಿ ತಿಳಿಸಿದ ಪ್ರಕಾರ ಪ್ರತಿಯೊಬ್ಬರೂ ಸ್ನಾನ ಮಾಡುವಾಗ ಮೈಗೆ ಎಳ್ಳು ಹಚ್ಚಿಕೊಂಡು ಮಾಡಬೇಕು. ಮತ್ತು ಅಧಿಕಾರಿಗಳಾದವರು ಸಮಸ್ತ ಪಿತೃಗಳಿಗೆ ತರ್ಪಣ ಕೊಡಬೇಕು. ದೇವರ ಪೂಜೆ, ನೈವೇದ್ಯ, ವೈಶದೇವ ಮಾಡುವಾಗ ಎಳ್ಳು, ಬೆಲ್ಲ ಇಡಬೇಕು. ವೈಶದೇವ ಮಾಡುವಾಗಲೂ ಊಟ ಮಾಡುವಾಗಲೂ ಎಳ್ಳು ಉಪಯೋಗಿಸಬೇಕು. ಸಣ್ಣ ಮಕ್ಕಳ ಮನೆಗೆ ಎಳ್ಳು ಬೀರಿಸಬೇಕು. ಅಲ್ಲದೆ ಗುರು-ಹಿರಿಯರಿಗೆ ಎಳ್ಳು ಕೊಟ್ಟು ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆಯಬೇಕು. ಈ ಎಲ್ಲ ಸಂಪ್ರದಾಯಗಳಿಗೂ ಶಾಸ್ತ್ರೀಯ ಕಾರಣಗಳಿವೆಯೆಂದು ಮರೆಯಬಾರದು.

ಮರುದಿನ ಕರಿದಿನ. ಒಂದು ವರ್ಷದಿಂದ ೫ ವರ್ಷದವರೆಗಿನ ಹುಡುಗರಿಗೆ ಕರಿಯೆರೆಯಬೇಕು. ಅಂದರೆ ಹಣ್ಣು, ಬೆಂಡು-ಬತ್ತಾಸ, ಚುರುಮುರಿ, ಶೇಂಗಾ, ಗೇರಹಣ್ಣು, ಬಾರಿಹಣ್ಣು, ಕಬ್ಬಿನ ತುಣುಕುಗಳನ್ನು ಸೇರಿಸಿ ಹುಡುಗರಿಗೆ ಹೊಸ ಅರಿವೆ ಹಾಕಿ ಅವರ ತಲೆಯ ಮೇಲೆ ಹಾಕಬೇಕು. ನಂತರ ಅವರಿಗೆ ಆರತಿ ಮಾಡಿ ಆಶೀರ್ವದಿಸಬೇಕು.

ಪುಷ್ಯ ಶು|| ಅಷ್ಟಮಿಯಿಂದ ಹುಣ್ಣಿಮೆವರೆಗೆ 'ಬನಶಂಕರಿ' ನವರಾತ್ರಿ ಉತ್ಸವ. ಬನಶಂಕರಿ ಕುಲದೇವತೆ ಇದ್ದವರು ಈ ವ್ರತವನ್ನು ತಪ್ಪದೇ ಆಚರಿಸಬೇಕು.

ತಿರುಕೊಯಿಲೂರು ಕ್ಷೇತ್ರದಲ್ಲಿ ಪುಷ್ಯ ಶು|| ದಶಮಿ ಏಕಾದಶಿ, ದ್ವಾದಶಿ ದಿನಗಳಲ್ಲಿ ಶ್ರೀ ರಘೋತ್ತಮ ತೀರ್ಥರ ಆರಾಧನೆ. ನಂತರ ಬನದ ಹುಣ್ಣಿಮೆ. ಬನಶಂಕರಿ ಉತ್ಸವ ಮುಕ್ತಾಯ. ಪುಷ್ಯ ಬಹುಳ ಸಪ್ತಮಿ. ಉತ್ತರಾದಿ ಮಠದಲ್ಲಿ ಮಹಾಸಮಾರಾಧನೆ. ಹಂಪಿಯಲ್ಲಿ ಶ್ರೀ ನರಹರಿತೀರ್ಥರ ಪುಣ್ಯತಿಥಿ ಅಷ್ಟಮಿ ದಿನ ಶ್ರೀ ಗೋಪಾಲದಾಸರ ಆರಾಧನೆ. ಆದರೆ ಪುಷ್ಯ ಬಹುಳ (15) ಅಮಾವಾಸ್ಯ ದಿವಸ ದಾಸ ಶ್ರೇಷ್ಠರಾದ ಶ್ರೀ ಪುರಂದರದಾಸರ ಆರಾಧನೆ ನಡೆದು ಪುಷ್ಯಮಾಸದ ಕಾರ್ಯಕ್ರಮಗಳು ಮುಕ್ತಾಯವಾಗುತ್ತವೆ.

## ಮಾಘಮಾಸ

**ಮಾಘಸ್ನಾನ :**

ಅಂದರೆ ಪುಷ್ಯಮಾಸದ ಹುಣ್ಣಿಮೆ (ಬನದ ಹುಣ್ಣಿಮೆ)ಯಿಂದ ಮಾಘ ಮಾಸದ ಹುಣ್ಣಿಮೆ (ಭಾರತ ಹುಣ್ಣಿಮೆ)ವರೆಗೆ ಅರುಣೋದಯದ ಒಳಗಾಗಿ ನದಿ-ಸರೋವರದಲ್ಲಿಯಾಗಲಿ, ಬಾವಿಯ ನೀರಿನಿಂದಾಗಲಿ, ಸ್ನಾನ ಮಾಡಬೇಕು. ಅನುಕೂಲವಾಗದೇ ಇದ್ದಲ್ಲಿ ಮನೆಯಲ್ಲಿಯಾದರೂ ಸ್ನಾನ ಮಾಡಬೇಕು.

**ಮೌನಗೌರಿ ವ್ರತ :**

7 ವರ್ಷ ತುಂಬಿ 8ನೇ ವರ್ಷ ನಡೆಯುವಾಗ ಹೆಣ್ಣು ಹುಡುಗಿಯರು ಅರುಣೋದಯದಲ್ಲಿ ಯಾರ ಹತ್ತಿರವೂ ಮಾತನಾಡದೆ ಸ್ನಾನ ಮಾಡಿ ಒಗೆದ ಬಟ್ಟೆ ಉಟ್ಟುಕೊಂಡು ಅರಿಷಿಣ-ಕುಂಕುಮ ಹಚ್ಚಿಕೊಂಡು ಎರಡು ಅರಿಷಿಣ ಬೇರು ತೆಗೆದುಕೊಂಡು ಅವುಗಳಿಗೆ ರೇಷ್ಮೆ ಅರಿವೆ ಸುತ್ತಬೇಕು. ಅವುಗಳಿಗೆ ಅರಿಷಿಣ, ಕುಂಕುಮ, ಗೆಜ್ಜೆವಸ್ತ್ರ, ತುಂಬಿಹೂ, ತುರುಬಿ ಹೂಗಳನ್ನು ಏರಿಸಬೇಕು. ತುಂಡಾಗದ ಅಕ್ಕಿಕಾಳನ್ನು ಆರಿಸಿ ಮಂತ್ರಾಕ್ಷತೆ ಮಾಡಿ ಶೃಂಗರಿಸಿದ ಅರಿಷಿಣ ಬೇರುಗಳಲ್ಲಿ ಮೌನಗೌರಿ ಆರಾಧನೆ ಮಾಡಿ ಅವುಗಳಿಗೆ ಏರಿಸಬೇಕು. ಸೂರ್ಯೋದಯದ ವೇಳೆಗೆ ಪೂರ್ವ ದಿಕ್ಕಿಗೆ ಮಂತ್ರಾಕ್ಷತೆ ಏರಿಸಬೇಕು. ಅನಂತರ ಮಾತು ಕಥೆ ಮಾಡಬಹುದು. ಆದರೆ ಊಟದ ಸಮಯದಲ್ಲಿ ಮಾತನಾಡಬಾರದು. ಸಾಯಂಕಾಲ ಅಂದರೆ ಸೂರ್ಯಾಸ್ತ ಆಗುವದರ ಒಳಗಾಗಿ ಊಟಮಾಡಿ ಮತ್ತೆ ಸೂರ್ಯನಿಗೆ (ಮುಳುಗುವ ಸೂರ್ಯ) ಮಂತ್ರಾಕ್ಷತೆ ಏರಿಸಬೇಕು. ಹೀಗೆ ವ್ರತ ಮಾಡುವದು ಅಂದರೆ 'ಮೌನಗೌರಿ ವ್ರತ' ಹೆಣ್ಣು ಮಕ್ಕಳು ಮಾಡಬೇಕು. ಇದರಿಂದ ಅವರ ಭವಿಷ್ಯವು ಸುಖದಾಯಕವಾಗುವದು. ಮೌನಗೌರಿ ಮುಗಿದ ದಿನ ಮರದ ಬಾಗಿಣ ಕೊಡಬೇಕು. ಹೊತ್ತು ತಪ್ಪಿ ಉಂಡರೆ ಹೋಳಿಗೆ (ಎರಡು ಹೋಳಿಗೆ ತುಪ್ಪ) ಬಾಗಿನ ಕೊಡಬೇಕು.

ಈ ವ್ರತದ ಬಗ್ಗೆ ಇರುವ ಇತಿಹಾಸದ ವಿವರ –

ರುದ್ರ ದೇವರು ಅಂದದ್ದು "ದೇವ ದೇವೋತ್ತಮಾ ! ಎಡದಲ್ಲಿ ವಿಷ್ಣು, ಬಲದಲ್ಲಿ ಬ್ರಹ್ಮ, ತೊಡೆಯಲ್ಲಿ ಪಾರ್ವತಿದೇವಿ, ಜಡೆಯಲ್ಲಿ ಗಂಗೆ, ನಂದಿ ಏರಿ ಕೆಂಪಡೆ ಬಿಟ್ಟುಕೊಂಡು ಬಂದ ದೇವ, ಕೊಂಬು ನೋಡು, ಕೊಳಲು ನೋಡು, ವಾಳು ನೋಡು, ಅಂತರಿಕ್ಷ ಮಾರ್ಗದಲ್ಲಿ ಬರುತ್ತಿರುವ ಪುಟ್ಟ-ಪುಟ್ಟ ಮುತ್ತೈದೆಯರು ಪಟ್ಟೆವಾಳಿ ಉಟ್ಟುಕೊಂಡು (ಫಣಿ) ಕುಪ್ಪುಸ ತೊಟ್ಟುಕೊಂಡು ಮುತ್ತಿನ ತಟ್ಟೆಯಲಿ ಅರಿಷಿಣ-ಕುಂಕುಮ, ಗೆಜ್ಜೆವಸ್ತ್ರ, ಗಂಧ, ಅಕ್ಷತೆ ಇಟ್ಟುಕೊಂಡು ಅಂತರಿಕ್ಷದಲ್ಲಿ ಸಾಲಾಗಿ ಹೋಗುತ್ತಾರೆ. ಪುಟ್ಟ ಪುಟ್ಟ ಅಮ್ಮಗಳು ನಾರಿನ ಮಡಿ ಉಟ್ಟುಕೊಂಡು ಪತ್ತಿಬುಟ್ಟಿ ಬಗಲಲ್ಲಿ ಇಟ್ಟುಕೊಂಡು ಅವರೊಂದು ಸಾಲುಸಾಲಾಗಿ ಹೋಗುತ್ತಾರೆ. ಹೀಗೇಕೆ ಸ್ವಾಮಿ ? ಅಂತಾ ಕೇಳಲಾಗಿ "ಮುತ್ತೈದೆಯರು ಮೌನಗೌರಿ ಆಚರಿಸಿ ಪುಣ್ಯ ಮಾಡಿದವರು ಆದರೆ ಪುಟ್ಟ ಪುಟ್ಟ ಅಮ್ಮಗಳು ಮೌನಗೌರಿ, ಮಾಘಸ್ನಾನ ಮಾಡದ ಪಾಪಿಷ್ಠರು" ಅಂತಾ ಹೇಳಲಾಗಿ, ಮೌನಗೌರಿ ಅಂದರೆ ಏನು ? ಮಾಘಸ್ನಾನ ಎಂದರೇನು ? ಅಂತಾ ವಿಚಾರಿಸಲಾಗಿ –

"ಮೌನಗೌರಿ ಅಂದರೆ ಅಷ್ಟವರ್ಷದ ಕನ್ನಿಕೆಯರು ಮಾಘ ಶು|| ಪ್ರತಿಪದೆ ಇಲ್ಲವೆ ತದಿಗೆಯಿಂದ ಫಾಲ್ಗುಣ ಶು|| ಪ್ರತಿಪದೆ ಅಥವಾ ತದಿಗೆವರೆಗೆ ಅರುಣೋದಯದಲ್ಲಿ ಮಾತನಾಡದೆ ಸ್ನಾನ ಮಾಡಿ ಶುದ್ಧ ಬಟ್ಟೆ ಉಟ್ಟುಕೊಂಡು ಅರಿಷಿಣ-ಕುಂಕುಮ ಹಚ್ಚಿಕೊಂಡು ಗೌರಿ ಮುಂದೆ ಸಾರಿಸಿ ರಂಗವಲ್ಲಿ ಬರೆದು ಅಂದರೆ, ಶ್ರೀಕಾರ, ೫ ಶಂಖ, ೫ ಚಕ್ರ, ಕಪ್ಪುರ, ಪಾರ್ವತಿ ಚಿತ್ರ ಬಿಡಿಸಿ ಎರಡು ಹಸಿ ಅರಿಷಿಣ ಬೇರು ತೆಗೆದುಕೊಂಡು ಶುದ್ಧೋದಕದಿಂದ ಸ್ನಾನ ಮಾಡಿಸಿ, ಗೆಜ್ಜೆವಸ್ತ್ರ, ಅರಿಷಿಣ-ಕುಂಕುಮ ಹಚ್ಚಿ, ರೇಶ್ಮೆ ವಸ್ತ್ರ ಹೊದಿಸಿ ೫ ತುಂಬೆ ಹೂ, ೫ ತುರಬಿ ಹೂ, ಬಿಲ್ವಪತ್ರೆ ಏರಿಸಿ ಆರತಿ ಮಾಡಬೇಕು. ಸೂರ್ಯೋದಯಕ್ಕೆ ಸರಿಯಾಗಿ ಪೂರ್ವದಿಕ್ಕಿಗೆ ಮಂತ್ರಾಕ್ಷತೆ ಏರಿಸಿ ನಂತರ ಮಾತನಾಡಬಹುದು. ಸಾಯಂಕಾಲ ಸೂರ್ಯಾಸ್ತಕ್ಕಿಂತ ಮುಂಚೆ ಮೌನದಿಂದ ಊಟ ಮಾಡಿ ಪಶ್ಚಿಮ ದಿಕ್ಕಿಗಿರುವ ಸೂರ್ಯನಿಗೆ ಮಂತ್ರಾಕ್ಷತೆ ಏರಿಸಿದ ನಂತರ ಮಾತನಾಡಬಹುದು. ಈ ವ್ರತಾಚರಣೆ ಮಾಡುವಾಗ ಬೆಳಿಗ್ಗೆ ಹಾಲು ಕುಡಿಯಬಾರದು. ಸಾಯಂಕಾಲ ಮೊಸರು ತಿನ್ನಬಾರದು. ಹೀಗೆ 5 ವರ್ಷದವರೆಗೆ ಈ ವ್ರತವನ್ನು ಆಚರಿಸಬೇಕು. ವ್ರತದ ಮೊದಲನೆ ವರುಷ ಬ್ರಾಹ್ಮಣನಿಗೆ ಅಕ್ಕಿದಾನ, 2 ನೇ ವರ್ಷ ಎಳ್ಳು ದಾನ, 3 ನೇ ವರ್ಷ ಉಪ್ಪು, 4 ನೇ ವರ್ಷ ಕಪ್ಪು ಬೇಳೆ, 5 ನೇ ವರ್ಷ ಅರಿಷಿಣ-ಕುಂಕುಮ, ದಾನ ಮಾಡಿದಲ್ಲಿ ದೀರ್ಘ ಸುಮಂಗಲೆಯಾಗಿ ಸಕಲ ಸೌಭಾಗ್ಯ ಪಡೆಯುವರು". ರುದ್ರ ದೇವರು ಹೇಳಿದ್ದು ಸವಿಸ್ತಾರ.

**ರಥ ಸಪ್ತಮಿ :**

ಬಿಸಿಲು ಕಾಲ ಪ್ರಾರಂಭವಾಗುವದರಿಂದ ಸೂರ್ಯನ ಚಲಾವಣೆಯಲ್ಲಿ ಬದಲಾವಣೆಯಾಗುವದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ರಥ ಸಪ್ತಮಿ ಸೂರ್ಯನಾರಾಯಣನಿಗೆ ವಿಶೇಷ ಪೂಜೆ ಸಲ್ಲಿಸಬೇಕು. ಮನೆಯ ಬಾಗಿಲಲ್ಲಿ ಸಾರಿಸಿ ಸೂರ್ಯನ ರಥವನ್ನು ಬಿಡಿಸಿ (ಚಿತ್ರಿಸಿ) ಅರಿಷಿಣ, ಕುಂಕುಮ, ಗೆಜ್ಜವಸ್ತ್ರ ಏರಿಸಬೇಕು. ಒಂದು ಚಿಕ್ಕ ಪಾತ್ರೆಯಲ್ಲಿ ಹಾಲು ಹಾಕಿ ಕುಳ್ಳಿನಿಂದ ತಯಾರಿಸಿದ ಅಗ್ನಿಯಲ್ಲಿ ಕಾಯಲು ಇಡಬೇಕು. ಹಾಲು ಕಾದು ಕಾದು ಉಕ್ಕು ಬರುತ್ತದೆ. ಯಾವ ದಿಕ್ಕಿಗೆ ಉಕ್ಕುತ್ತದೆಯೋ ಆ ದಿಕ್ಕಿನಲ್ಲಿಯ ಸಕಲ ಪ್ರಾಣಿಗಳಿಗೆ ಶುಭವಾಗುವದೆಂದು ಗ್ರಹಿಕೆ. ಹೀಗೆ ಕಾಸಿದ ಹಾಲನ್ನು ಸೂರ್ಯನಾರಾಯಣನಿಗೆ ನೈವೇದ್ಯ ಮಾಡಿ ಮನೆಯ ಸದಸ್ಯರೆಲ್ಲ ಊಟದಲ್ಲಿ ಉಪಯೋಗಿಸಬೇಕು. ಆ ದಿನ ಬೆಳಿಗ್ಗೆ ಸ್ನಾನ ಮಾಡುವಾಗ ಗಂಡಸರು 7 ಎಕ್ಕೆ ಎಲೆಗಳನ್ನು ತಲೆಯ ಮೇಲಿಟ್ಟುಕೊಂಡರ ಹೆಂಗಸರು ಹೆಗಲ ಮೇಲಿಟ್ಟುಕೊಂಡು ಸ್ನಾನ ಮಾಡಬೇಕು. ನಂತರ ಒಂದು ತಟ್ಟೆಯಲ್ಲಿ ನೀರು ಹಾಕಿ ಅದರ ಮೇಲೆ ಎಕ್ಕೆ ಎಲೆ ಇಟ್ಟು ಅದರ ಮೇಲೆ ತುಪ್ಪದ ದೀಪ ಇಟ್ಟು, ಸೂರ್ಯ ದೇವನಿಗೆ ಆರತಿ ಮಾಡಬೇಕು. ಇಲ್ಲಿ ಉಪಯೋಗಿಸಿದ ನೀರನ್ನು ಕುಡಿದರೆ ಇಡೀ ವರ್ಷ ಪ್ರಕೃತಿ ಸರಿಯಾಗಿ ಉಳಿಯುವದೆಂದು ಹಿರಿಯರು ಹೇಳುತ್ತಾರೆ. ಈ ದಿನ ಬೂದು-ಕುಂಬಳಕಾಯಿಯನ್ನು ಸತ್ಪಾತ್ರದಲ್ಲಿ ದಾನ ಮಾಡಿದರೆ ವಿಶೇಷ ಪುಣ್ಯಪ್ರಾಪ್ತಿ ಆಗುವದು. ಏಳು ಎಕ್ಕೆ ಎಲೆ ಇಟ್ಟು ಸ್ನಾನ ಮಾಡುವಾಗ ಈ ಮಂತ್ರ ಜಪಿಸಬೇಕು. **ಯದಾ ಜನ್ಮಕೃತಂ ಪಾಪಂ ಮಯಾ ಜನ್ಮಸು ಜನ್ಮಸು । ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮಿ** ( ಎಕ್ಕೆ ಎಲೆ ಸೂರ್ಯನಿಗೆ ಪ್ರೀತಿಕರ.)

**ಭೀಷ್ಮಾಷ್ಟಮಿ :**

ರಥಸಪ್ತಮಿ ಮರುದಿನ ಭೀಷ್ಮಾಷ್ಟಮಿ ಅಂದು ತರ್ಪಣ ಕೊಡಲು ಅಧಿಕಾರ ಹೊಂದಿದವರೆಲ್ಲರೂ ಬ್ರಹ್ಮಯಜ್ಞ ಮಾಡಿಕೊಳ್ಳುವಾಗ ಭೀಷ್ಮ ಪಿತಾಮಹರಿಗೂ ತರ್ಪಣವನ್ನು ಅವಶ್ಯ ಕೊಡಬೇಕು.

**ಮಧ್ವನವಮಿ :**

ಮಾಧ್ವರಿಗೆ ಬಹಳ ಪವಿತ್ರ ದಿನ. ಮಾಧ್ವಮತಸ್ಥಾಪಕರಾದ ಆನಂದತೀರ್ಥರು ಬದರಿಕಾಶ್ರಮ ಪ್ರವೇಶ ಮಾಡಿದ ದಿವಸ. ಉಡುಪಿ ಕ್ಷೇತ್ರದಲ್ಲಿ ಶ್ರೀ ಮಧ್ವರು ಅನಂತೇಶ್ವರ ದೇವಸ್ಥಾನದಲ್ಲಿ ಪ್ರವಚನ ಮಾಡುತ್ತಿರುವಾಗ ದೇವತೆಗಳಿಂದ ಪುಷ್ಪವೃಷ್ಟಿ ಆಗುತ್ತಿದ್ದ ದೃಶ್ಯವನ್ನು ಭಕ್ತರು ನೋಡಿ ಆನಂದಪಡುವ ಸಮಯದಲ್ಲಿ ಶ್ರೀ ಮಧ್ವಾಚಾರ್ಯರ ಪ್ರತಿಕೃತಿಯನ್ನು ತಯಾರಿಸಿದ್ದು, ನಿತ್ಯ ಶ್ರೀ ಕೃಷ್ಣನಿಗೆ ಪೂಜೆ ನೈವೇದ್ಯ ಆದ ನಂತರ ಈ

... ಗೂ ನೈವೇದ್ಯ - ಮಂಗಳಾರತಿ ನಡೆಯುತ್ತಿದೆ. ಉಡುಪಿ ಕ್ಷೇತ್ರದಲ್ಲಿ ... ರಿಂದ ಸ್ಥಾಪಿತವಾದ ಶ್ರೀ ಕೃಷ್ಣನ ಪೂಜೆಯನ್ನು ಅವರೇ ಸ್ಥಾಪಿಸಿದ ... ಗಳಿಂದ ತ್ರಿಕಾಲ ಪೂಜೆ ನೋಡಲು ನಾನಾದೇಶದ ಜನರು ಬಂದು ನೋಡಿ ... ಮಧ್ವನವಮಿ ಉತ್ಸವವನ್ನು ಪ್ರಾತಃ ಕಾಲದಿಂದ ರಾತ್ರಿ ಇಡೀ ದೇಶದ ಎಲ್ಲ ... ಜ್ಞಾನಯಜ್ಞವನ್ನು ಮಾಡಿ ಆಚಾರ್ಯರು ಮುಮುಕ್ಷುಗಳಿಗೆ (ಸಾಧಕರಿಗೆ) ... ಮಾರ್ಗವನ್ನು ತೋರಿಸಿದ್ದಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸಿ ಕೃತಾರ್ಥರಾಗುತ್ತಾರೆ.

... ಶು॥ ತ್ರಯೋದಶಿಯಂದು ಸುವಾಸಿನಿ ಸ್ತ್ರೀಯರು ಸುಮಂಗಲೆಯರನ್ನು ... ಗ್ರಹಪ್ರಾಪ್ತಿಗಾಗಿ ಮರದ ಬಾಗಿಣವನ್ನು ಕೊಡಬೇಕು. ಮಾಘಮಾಸದ ಹುಣ್ಣಿಮೆ ... (ಭಾರತ ಹುಣ್ಣಿಮೆ) ಕುಲಧರ್ಮ ಇದ್ದವರ ಮನೆಯ ಹೆಣ್ಣು ಮಕ್ಕಳು ತಮ್ಮ ... ಗೆ ವಿಶೇಷ ಪೂಜೆ ಸಲ್ಲಿಸಿ ಹೊಸ ಸೀರೆ ತಂದು ಏರಿಸಿ ಆರತಿ ಮಾಡಿದ ನಂತರ ... ರಿಸಿದ ಸೀರೆಯನ್ನು ತಾವು ಉಪಯೋಗಿಸುತ್ತಾರೆ.

# ಫಾಲ್ಗುಣಮಾಸ

ಪಯೋವ್ರತ ಮಾಡುವವರು ಈ ತಿಂಗಳು ಶು|| ಪ್ರತಿಪದೆಯಿಂದ ತ್ರಯೋದಶಿವರೆಗೆ ಅಂದರೆ ದ್ವಾದಶಿ ಪೂರ್ಣ ಮಾಡಿ ತ್ರಯೋದಶಿ ದಿನ ಉದ್ಯಾಪನೆ ಮಾಡಬೇಕು.

**ವ್ರತದ ಕ್ರಮ :** ಪ್ರತಿಪದೆ ದಿನ ಬೇಗನೆ ಎದ್ದು ಹೆಣ್ಣುಮಕ್ಕಳು ಎರೆದುಕೊಂಡು ಪುಣ್ಯಾಹವಾಚನೆ ಮಾಡಿಸಿಕೊಳ್ಳಬೇಕು. ಮಡಿಯಿಂದ ಸುವಾಸನೆ ಅಕ್ಕಿ ತಂದು ತೊಳೆದು ತುಪ್ಪದಲ್ಲಿ ಬಿಸಿ ಮಾಡಿ ಮೂರು ಮುಷ್ಟಿ ಮಾತ್ರ ಅಕ್ಕಿಯನ್ನು ತೆಗೆದುಕೊಂಡು ಆಕಳು ಹಾಲಿನಲ್ಲಿಯೇ ಬೇಯಿಸಬೇಕು. ವೈಶ್ವದೇವ ಮಾಡುವಾಗ ಈ ಅನ್ನದಲ್ಲಿ ಸ್ವಲ್ಪ ಬೆಲ್ಲ ಸೇರಿಸಿ ಈ ವ್ರತದ ಬಗ್ಗೆ ಇರುವ ಮಂತ್ರ ಹೇಳುತ್ತ ಗಂಡಸರು ಅಗ್ನಿಯಲ್ಲಿ ಹೋಮ ಮಾಡಬೇಕು. ಹೋಮ ಮಾಡಿ ಉಳಿದ ಅನ್ನದಲ್ಲಿ ಸುಮಾರು ಅರ್ಧದಷ್ಟು ಭಾಗವನ್ನು ಮನೆಯ ಸದಸ್ಯರಿಗೆ ಪ್ರಸಾದ ರೂಪವಾಗಿ ಕೊಟ್ಟು ಒಂದು ಅಥವಾ ಎರಡು ತುತ್ತು ಪ್ರಸಾದವನ್ನು ಮಾತ್ರ ವ್ರತ ಮಾಡಿದವರು ಸೇವಿಸಬೇಕು. ಆದರೆ ಆಕಳ ಹಾಲನ್ನು ದೇವರಿಗೆ ಅಭಿಷೇಕ ಮಾಡಿಸಿ, ನೈವೇದ್ಯ ಮಾಡಿ ತಮ್ಮ ಪ್ರಕೃತಿಗೆ ಸರಿ ಹೋಗುವಷ್ಟನ್ನು ತೆಗೆದುಕೊಳ್ಳಬಹುದು. ಅದರಂತೆ ನೀರು ಕುಡಿಯಬಹುದು. ದಿನದಲ್ಲಿ ಹೀಗೆ ಒಮ್ಮೆ ಮಾತ್ರ ಆಕಳ ಹಾಲು, ಸೇವಿಸಬೇಕು. ರಾತ್ರಿ ಏನೂ ಆಹಾರ ಸೇವಿಸಬಾರದು. ದಿನಕ್ಕೆ 3 ಸಲ ಸ್ನಾನ ಮಾಡಬೇಕು. (ಅಂದರೆ ಬೆಳಿಗ್ಗೆ-ಮಧ್ಯಾಹ್ನ ಹಾಗೂ ಸಾಯಂಕಾಲ) ವ್ರತದಲ್ಲಿ ಮನೆಯಲ್ಲಿ ಹನ್ನೆರಡೂ ದಿನ ಭಾಗವತ ಪುರಾಣ ಕೇಳಬೇಕು. ಅಲ್ಲದೆ ನಿತ್ಯವೂ (ಹನ್ನೆರಡೂ ದಿನ) ದಂಪತ್ತು ಭೋಜನ, ಒಬ್ಬ ಬ್ರಹ್ಮಚಾರಿಗೆ ಭೋಜನ ಮಾಡಿಸಬೇಕು. ಉದ್ಯಾಪನೆ ದಿನ ಹೋಮ-ಹವನ ಮಾಡಿ 12 ದಂಪತ್ತು ಭೋಜನ ಮಾಡಿಸಬೇಕು. ಹಾಗೂ 12 ಜನ ಮುತ್ತೈದೆಯರಿಗೆ ಮರದ ಬಾಗಿಣ ಕೊಡಬೇಕು. ಹೀಗೆ ಬ್ರಾಹ್ಮಣ ಸುವಾಸಿನಿಯರಿಗೆ ಅನ್ನ ಸಂತರ್ಪಣೆ ಮಾಡಿಸಿದ ಮೇಲೆ ಬಂಧು-ಬಳಗದವರೊಡಗೂಡಿ ತಾನು ತೀರ್ಥ ಪ್ರಸಾದ ಸ್ವೀಕರಿಸಬೇಕು.

ಈ ವ್ರತವನ್ನು ಹಿಂದಕ್ಕೆ ಕಶ್ಯಪ ಋಷಿಗಳ ಪತ್ನಿ ಅದಿತಿ ದೇವಿಯು ಆಚರಿಸಿ ಇಂದು ಪದವಿಯಿಂದ ಚ್ಯುತನಾಗಿದ್ದ ತನ್ನ ಮಗ ಇಂದ್ರನಿಗೆ ಮತ್ತೆ ಇಂದ್ರಪದವಿಯು ದೊರೆಯುವಂತೆ ಮಾಡಿದಳು ಮಕ್ಕಳಾಗದವರು ಶ್ರದ್ಧೆ-ಭಕ್ತಿಯಿಂದ ಈ ವ್ರತವನ್ನು ನಿಯಮದಂತೆ ಆಚರಿಸಿದಲ್ಲಿ ಸಂತಾನ ಪ್ರಾಪ್ತಿಯಾಗುವದು.

**ಹೋಳಿ ಹುಣ್ಣಿಮೆ :**

ಇಂದು ಕಾಮನ ಹಬ್ಬ. ಕಾಮ-ರತಿಯರನ್ನು ಪೂಜಿಸಬೇಕು. ಕಾಮ-ರತಿಯರ ಚಿತ್ರ ಬರೆದು ಪೂಜಿಸಿ, ನೈವೇದ್ಯ ಎಲ್ಲ ಆದ ಮೇಲೆ ಆ ಚಿತ್ರವನ್ನು ಸುಟ್ಟು ನಂತರ ಭೋಜನ

ಮಾಡಬೇಕು. ಈ ಹಬ್ಬವನ್ನು ಸಾರ್ವಜನಿಕವಾಗಿ ಆಚರಿಸುವದು ನಡೆದು ಬಂದ ಪದ್ಧತಿಯಾಗಿದೆ. ಪ್ರತಿ ಊರಲ್ಲಿಯೂ ಸಾರ್ವಜನಿಕ ಸ್ಥಳದಲ್ಲಿ ಭವ್ಯ ಮಂಟಪ ಹಾಕಿ ರಟ್ಟಿನಿಂದ ತಯಾರಿಸಿ ಬಣ್ಣದಿಂದ ಸುಂದರವಾಗಿ ಅಲಂಕರಿಸಿದ ಕಾಮ-ರತಿಯರ ಮೂರ್ತಿಗಳನ್ನು ತಂದು ಮಂಟಪದಲ್ಲಿಟ್ಟು ಪೂಜಿಸಿ ರಾತ್ರಿ-ಹಗಲು ಅನ್ನದೆ ಮಂಟಪದಲ್ಲಿ ನೃತ್ಯ-ಸಂಗೀತ, ಭಜನೆ ನಾಡಹಾಡುಗಳನ್ನು ಹಾಡುವದು ಮೂಲ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಪಂಚಮಿ ದಿನ (ರಂಗಪಂಚಮಿ) ದಿನ ಕಾಮನನ್ನು ಸುಟ್ಟು ಹಾಕುತ್ತಾರೆ. ಇಡೀ ಊರಿನ ಜನರೆಲ್ಲರೂ ಓಕಳಿ ಆಡುತ್ತಾರೆ. ಮನುಷ್ಯ ತನ್ನಲ್ಲಿರುವ ಕಾಮ-ಕ್ರೋಧಗಳನ್ನು ಸುಟ್ಟು ಹಾಕಿದ ಸಂತೋಷದಲ್ಲಿ ಬಣ್ಣ (ಓಕಳಿ) ಆಡುವದು ಕುಣಿದಾಡುವದು, ಈ ಹಬ್ಬದ ವೈಶಿಷ್ಟ್ಯವಾಗಿದೆ. ವರ್ಷದ ಕೊನೆಯ ಹಬ್ಬವಾದ್ದರಿಂದ ತಮ್ಮ ಕಾಮ, ಕ್ರೋಧ ಬಿಟ್ಟು ಹೊಸ ವರ್ಷಕ್ಕೆ ಕಾಲಿಡುವದೆ ಈ ಹಬ್ಬದ ಹಿರಿಮೆ.

ಫಾಲ್ಗುಣ ಮಾಸವು ಮಾಧ್ವರಿಗೆ ಸರ್ವಕಾಲವಾಗಿದೆ. ಫಾಲ್ಗುಣ ಶು|| ತ್ರಯೋದಶಿಯಿಂದ ಬ|| ಪಂಚಮಿವರೆಗೆ ಕ್ರಮವಾಗಿ ಶ್ರೀ ಧೀರೇಂದ್ರ ಸ್ವಾಮಿಗಳು (ರಿತ್ತಿ), ಶ್ರೀ ಸತ್ಯಬೋಧ ಸ್ವಾಮಿಗಳು (ಸವಣೂರು), ಶ್ರೀ ವಾದಿರಾಜ ಸ್ವಾಮಿಗಳು (ಸೋದೆ), ಶ್ರೀ ವ್ಯಾಸರಾಜ ಸ್ವಾಮಿಗಳು (ನವವೃಂದಾವನ) ಅಲ್ಲದೇ ಅಮಾವಾಸ್ಯ ದಿನದಂದು ಶ್ರೀ ಸತ್ಯ ಸಂತುಷ್ಟರು (ಮೈಸೂರು) ಈ ಮಹನೀಯರ ಆರಾಧನೆ ಮಹೋತ್ಸವವು ಜರಗುತ್ತವೆ. ಅನೇಕ ಭಗವದ್ಭಕ್ತರು ದೇಶದ ನಾನಾ ಭಾಗದಿಂದ ಆ ಆ ದಿನಗಳಲ್ಲಿ ನಡೆಯುವ ಆರಾಧನೆಗಳಿಗೆ ಹೋಗಿ ಸೇವೆ ಮಾಡಿ ಕೃತಾರ್ಥರಾಗುತ್ತಾರೆ.

ಹೀಗೆ ಚೈತ್ರ ಮಾಸದಿಂದ ಆರಂಭವಾದ ಹಬ್ಬ, ವ್ರತ, ನಿಯಮಗಳು ಫಾಲ್ಗುಣ ಮಾಸ ಅಮಾವಾಸ್ಯ ದಿನ ಪರ್ಯಂತ ನಡೆದು ಬರಬಹುದಾದವುಗಳನ್ನು ವಿವರಿಸಿದ್ದೇನೆ. ನಾನು ಮೊದಲೇ ತಿಳಿಸಿದಂತೆ ಕೇವಲ ಹೆಣ್ಣು ಮಕ್ಕಳಿಗೆ ಅದರಲ್ಲೂ ಆಧುನಿಕರಿಗೆ ಉಪಯೋಗವಾಗಲೆಂದು ನಾನು ತಿಳಿದಷ್ಟು ಸಂಗ್ರಹ ಮಾಡಿ ತಮ್ಮ ಮುಂದೆ ಇಟ್ಟಿದ್ದೇನೆ. ಈ ಪುಸ್ತಕ ಓದಿ ತಮ್ಮ ಅಭಿಪ್ರಾಯವನ್ನು ನನಗೆ ತಿಳಿಸಿದಲ್ಲಿ ಉಪಕೃತಳಾಗಿದ್ದೇನೆ. ಈ ಪುಸ್ತಕವೆಂದರೆ ಮನೆಯಲ್ಲಿ ಹಿರಿಯ ಮುತ್ತೈದೆಯಿದ್ದಂತೆ. ಅವಳು ದಿನಾಲು ಬೇಗ ಏಳಿರಿ, ಇಂದು ಈ ಹಬ್ಬ, ಹೀಗೆ ಆಚರಿಸಿರಿ ಅಂತಾ ಹೇಳುತ್ತಾಳೆ, ಅಂತಾ ತಿಳಿಯಬೇಕು.

ಇನ್ನೂ ಕೆಲವು ವಿಶೇಷವಾದವುಗಳನ್ನು ಇಲ್ಲಿ ಹೇಳುವದು ಅವಶ್ಯವಿದೆ. ಅವುಗಳು ಹೀಗಿವೆ.

## – ವಿಶೇಷ ಮಾಹಿತಿ –

ಚಾತುರ್ಮಾಸದಲ್ಲಿ ಕೊಡಬೇಕಾದ ದಾನಗಳ ವಿವರ (ಆಷಾಢ ಶು|| ದ್ವಾದಶಿಯಿಂದ ಕಾರ್ತಿಕ ಶು|| ದ್ವಾದಶಿವರೆಗೆ ಒಟ್ಟು ಹತ್ತು ದ್ವಾದಶಿಗಳಲ್ಲಿ ಕೊಡಬೇಕು) :

a) ಅರಿಷಿಣ, ಕುಂಕುಮ, ಖಣ, ಕಾಯಿ ಮತ್ತು ತುಲಸೀಗಿಡವನ್ನು ಕುಂಡದಲ್ಲಿ ನಟ್ಟು ಅದರಲ್ಲಿ ಕೃಷ್ಣನ ಮೂರ್ತಿ ಇಟ್ಟು ತುಳಸೀ ಗಿಡಕ್ಕೆ ಬಳೆ ಏರಿಸಿ ದಾನ ಮಾಡಬೇಕು.

b) ಮುತ್ತೈದೆಯರಿಗೆ ಉಡಿ ತುಂಬಬೇಕು.

c) ಬೆಳ್ಳಿ ಬಟ್ಟಲದಲ್ಲಿ ಇಲ್ಲವೆ ದೊನ್ನೆಯಲ್ಲಿ ಬೆಣ್ಣೆ ಹಾಕಿ ಬೆಣ್ಣೆಯಲ್ಲಿ ಡೊಗ್ಗಾಲು ಕೃಷ್ಣನ ಮೂರ್ತಿಯನ್ನು ಇಟ್ಟು ದಾನ ಕೊಡಬೇಕು. (ಮೂರ್ತಿಯು ಪಂಚಲೋಹ ಅಥವಾ ಬೆಳ್ಳಿಯಿಂದ ಮಾಡಿದ್ದು ಇರಬೇಕು).

d) ಮರದ ಬಾಗಿಣ ಕೊಡಬೇಕು.

e) ಹಾಲು, ಮೊಸರು, ಸಕ್ಕರೆ, ತುಪ್ಪಗಳನ್ನು ಪಾತ್ರೆಯಲ್ಲಿ ಹಾಕಿ ಪಾತ್ರೆ ಸಹಿತ ದಾನ ಮಾಡಬೇಕು.

f) ದಂಪತ್ತು ಕರೆದ ಭೋಜನ ಮಾಡಿಸಿ, ಸೀರೆ ಧೋತರಗಳನ್ನು ದಾನ ಕೊಡಬೇಕು.

g) ಶಾವಿಗೆ ಪಾಯಸ ಮಾಡಿ ಚಿಕ್ಕ ಚಿಕ್ಕ ಪಾತ್ರೆಗಳಲ್ಲಿ ಹಾಕಿ ಪಾತ್ರೆ ಸಹಿತ ದಾನ ಕೊಡಬೇಕು.

h) ದೇವರ ಪೂಜೆ ಸಾಮಾನುಗಳನ್ನು ದಾನ ಮಾಡಬೇಕು.

i) ಒಣಕೊಬ್ಬರಿ-ಬಟ್ಟಲದಲ್ಲಿ ಅರಿಷಿಣಕುಂಕುಮ ಹಾಕಿ ದಾನ ಮಾಡಬೇಕು.

j) ಒಣಕೊಬ್ಬರಿ ಗಿಟಕವನ್ನೂ ತೆಗೆದುಕೊಂಡು ಅದರಲ್ಲಿ ರೂಪಾಯಿ ನಾಣ್ಯ ಹಾಕುವಂತೆ ಕೊರೆದು ಅದರೊಳಗೆ ನಮಗೆ ತಿಳಿದಷ್ಟು ಹಣವನ್ನು ಹಾಗೂ ಡೊಗ್ಗಾಲ ಶ್ರೀ ಕೃಷ್ಣನನ್ನೂ ಹಾಕಿ, ಅದರ ಬಾಯಿಯನ್ನು ಕೊಬ್ಬರಿ ಯಿಂದಲೇ ಕಾಣದಂತೆ ಮುಚ್ಚಿ ಸದ್ಬ್ರಾಹ್ಮಣರಿಗೆ ದಾನ ಕೊಡಬೇಕು.

k) ಬಟ್ಟಲದಲ್ಲಿ ಅಕ್ಕಿ ಹಾಕಿ ಅನ್ನಪೂರ್ಣ ಮೂರ್ತಿ ಹಾಗೂ 'ಶಿಂಶುಮಾರ' ಮೂರ್ತಿ ಇಟ್ಟು ದಾನ ಮಾಡಬೇಕು.

l) ಬಟ್ಟಲಲ್ಲಿ ಕಡ್ಲಿಬೇಳೆ ಹಾಕಿ ದಾನ ಮಾಡಬೇಕು.

iii) ಬಟ್ಟಲಲ್ಲಿ ಅಕ್ಕಿ ಹಾಕಿ ತಮಗೆ ಅನುಕೂಲವಾದಷ್ಟು ದ್ರವ್ಯವನ್ನಿಟ್ಟು (ಗುಪ್ತವಾಗಿ) ದಾನ ಕೊಡಬೇಕು.

iv) ಚಾತುರ್ಮಾಸ ವ್ರತದಲ್ಲಿ ಉಪಯೋಗಿಸುವ ಆಹಾರ ಪದಾರ್ಥಗಳನ್ನು ಆ ಆ ವ್ರತಗಳಲ್ಲಿ ದಾನ ಮಾಡಬೇಕು.

ಹೀಗೆ ದಾನಗಳನ್ನು ಒಂದೊಂದು ವರ್ಷ ಒಂದೊಂದರಂತೆ ಮಾಡುತ್ತ ಹೋಗಬೇಕು. ಅಲ್ಲದೆ ಚಾತುರ್ಮಾಸ ವ್ರತವನ್ನು ಪ್ರಾರಂಭಿಸಿದ ವರ್ಷದಲ್ಲಿ ಒಂದು ಬಟ್ಟಲಲ್ಲಿ ಅಕ್ಕಿ ಹಾಕಿ ಬೆಳ್ಳಿಯ ಅಥವಾ ಪಂಚಲೋಹದ ಆಕಳನ್ನು ದಾನ ಮಾಡಬೇಕು. ಎರಡನೇ ವರ್ಷದಲ್ಲಿ 1 ತಟ್ಟೆಯಲ್ಲಿ ತುಪ್ಪ ಕರಗಿಸಿ ಸುರುವಿ ತುಪ್ಪ ಹೆತ್ತ ಮೇಲೆ ಅದರಲ್ಲಿ ಆಕಳನ್ನು ಬರೆದು ಪೂಜೆ ಮಾಡಿ ಆ ತಟ್ಟೆಯನ್ನು ದಾನ ಮಾಡಬೇಕು.

ವ್ರತವನ್ನು ಆಚರಿಸಿದ ಮೂರನೇ ವರ್ಷ ಯಾವುದಾದರೂ ಪುಣ್ಯ ಕ್ಷೇತ್ರಕ್ಕೆ ಹೋಗಿ ಅಲ್ಲಿ ಪ್ರತ್ಯಕ್ಷ ಒಂದು ಆಕಳನ್ನೇ ಕೊಡಬೇಕು. ಹೀಗೆ ಮಾಡಿದಲ್ಲಿ ಹಿಂದೆ ದಾನಮಾಡಿದ ಪಂಚಲೋಹದ ಆಕಳು ಅಥವಾ ತುಪ್ಪದಲ್ಲಿ ಬರೆದು ದಾನ ಮಾಡಿದ ಆಕಳು ದಾನ ಮಾಡಿದರೂ ಪ್ರತ್ಯಕ್ಷವಾಗಿ ಸತತ ಮೂರು ವರ್ಷದಲ್ಲಿ ಏನೇ ದಾನ ಮಾಡಿದ್ದರೂ ಇಲ್ಲಿ ಹೇಳಿದ ಎಲ್ಲ ದಾನಗಳನ್ನು ಮೂರು ವರ್ಷಗಳ ದ್ವಾದಶಿಗಳಲ್ಲಿ (30 ದ್ವಾದಶಿಗಳಲ್ಲಿ) ಸಹ ದಾನಮಾಡಿದರೆ ಪುಣ್ಯ ಬರುವದಾಗಿ ಶಾಸ್ತ್ರ ತಿಳಿಸುತ್ತದೆ. ಅಷ್ಟು ದ್ವಾದಶಿ ಬರೆ ಆಕಳನ್ನು ದಾನ ಮಾಡಿದ ಫಲ ಬರುತ್ತದೆ.

**ಸಾಧ್ಯಯರು ಅನುಸರಿಸಬೇಕಾದ ನಿಯಮಗಳು :**

ಯಾವುದೇ ವ್ರತದ ಆರಂಭದಲ್ಲಿ ಸಂಕಲ್ಪ ಮಾಡಬೇಕು. ಹೂ, ಬತ್ತಿ ಹಾಗೂ ಮಂಗಳಾರತಿ ಬತ್ತಿಗಳನ್ನು ಕ್ರಮವಾಗಿ, ಹೂಬತ್ತಿ ಮಾಡುವಾಗ ಅಚ್ಯುತಾಯನಮಃ। ಅನಂತಾಯನಮಃ। ಗೋವಿಂದಾಯನಮಃ। ಅಂತಲೂ, ಪ್ರದ್ಯುಮ್ನ। ಸಂಕರ್ಷಣ। ಅನಿರುದ್ಧ। ವಾಸುದೇವ। ನಾರಾಯಣ। ಅಂತಲೂ, ಮಂಗಳಾರತಿ ಬತ್ತಿ ಮಾಡುವಾಗ ಅನ್ನಬೇಕು. ಒಂದೊಂದು ಲಕ್ಷ ಮಾಡಬೇಕು. ಬೆಳಗಿನಿಂದ ಮಧ್ಯಾಹ್ನ 12 ಘಂಟೆ ಒಳಗಾಗಿ ಮಂಗಳಾರತಿ ಬತ್ತಿಗಳನ್ನು ಮಾಡಬೇಕು. ಅಲ್ಲದೆ ಅಷ್ಟದಳದ (8 ಕುಸುಮಾಕ್ಷದ) ಬತ್ತಿ ಮಾಡಿಕೊಂಡು ದಿನಕ್ಕೆ ಎರಡರಂತೆ ತುಪ್ಪದಲ್ಲಿ ತೋಯಿಸಿ ದೇವರ ಮುಂದೆ ದೀಪ ಹಚ್ಚಿಡಬೇಕು. ಚೈತ್ರಮಾಸ ಹುಣ್ಣಿಮೆಯಿಂದ ಫಾಲ್ಗುಣಮಾಸದ ಹುಣ್ಣಿಮೆವರೆಗೆ (ಒಟ್ಟು 12 ಹುಣ್ಣಿಮೆ), 51 ಎಳೆಗಳಿಂದ 51 ಕುಸುರಿನಿಂದ ತಯಾರಿಸಿದ 51 ಬತ್ತಿಗಳನ್ನು ತುಪ್ಪದಲ್ಲಿ ತೋಯಿಸಿ ಪರಮಾತ್ಮನ 51 ರೂಪಗಳನ್ನು ನೆನೆಸಿಕೊಳ್ಳುತ್ತ ದೇವರ ಮುಂದೆ ದೀಪ ಹಚ್ಚಿಡಬೇಕು.

## ಹಬ್ಬ ಹರಿದಿನ ಹಾಗೂ ವ್ರತಾಚರಣೆ

51 ರೂಪಗಳ ಮೂಲಾಕ್ಷರ ಅಭಿಮಾನಿ ದೇವತೆಗಳ ಹೆಸರುಗಳು ಇಂತಿವೆ. 51 ದೇವತೆಗಳ ಹೆಸರುಗಳು -

1) ಅ. ಅಜಾಯನಮಃ 2) ಆ. ಆನಂದಾಯನಮಃ, 3) ಇಂದ್ರಾಯನಮಃ, 4) ಈ. ಈಶಾಯನಮಃ, 5) ಉ. ಉಗ್ರಾಯನಮಃ, 6) ಊ. ಊರ್ಜಾಯನಮಃ, 7) ಋ. ಋತಂಭರಾಯನಮಃ, 8)ಋ. ಋಘುಯಾನಮಃ, 9) ಲೃ. ಲೃಶಾಯನಮಃ, 10) ಲ್ಹೂಶಾಯನಮಃ, 11) ಏ. ಏಕಾತ್ಮಾಯನಮಃ, 15) ಅಂ. ಅಂತಾಯನಮಃ, 16) ಅಃ. ಅರ್ಧಗರ್ಭಾಯನಮಃ, 17) ಕ. ಕಪಿಲಾಯನಮಃ, 18) ಖ. ಖಪತೇನಮಃ, 19) ಗ. ಗರುಡಾಸನಾಯನಮಃ, 20) ಘ. ಘರ್ಮಾಯನಮಃ, 21) ಙ. ಙಸಾರಾಯ ನಮಃ, 22) ಚ. ಚಾರ್ವಾಂಗಾಯನಮಃ, 23) ಛ. ಛಂದೋಗವ್ಯಾಯನಮಃ, 24) ಜ. ಜನಾರ್ಧನಾಯನಮಃ, 25) ಝ. ಝುಟಿತಾರಾಯನಮಃ, 26) ಞ. ಞಮಾಯನಮಃ, 27) ಟ. ಟಂಕಿಯೇನಮಃ, 28) ಠ. ಠಳಕಾಯನಮಃ, 29) ಡ. ಡರಕಾಯನಮಃ, 30) ಢ ಢರೇಣಮಃ, 31) ಣ. ಣಾತ್ಮೇನಮಃ, 32) ತ. ತಾರಾಯನಮಃ, 33) ಥ. ಥಬಾಯನಮಃ, 34) ದ. ದಂಡೀನಮಃ, 35) ಧ. ಧನ್ವಿನಮಃ, 36) ನ. ನಮ್ಯಾನಮಃ, 37) ಪ. ಪರಾಯನಮಃ, 38) ಫ. ಫಲೀನಮಃ, 39) ಬ. ಬಲೀನಮಃ, 40) ಭ. ಭಗಾಯನಮಃ, 41) ಮ. ಮನವೇನಮಃ, 42) ಯ. ಯಜ್ಞಾಯನಮಃ, 40) ಭ. ಭಗಾಯನಮಃ, 41) ಮ. ಮನವೇನಮಃ, 42) ಯ. ಯಜ್ಞಾಯನಮಃ, 43) ರ. ರಾಮಾಯನಮಃ, 44) ಲ. ಲಕ್ಷ್ಮೀಪತಯೇನಮಃ, 45) ವ. ವರಾಯನಮಃ, 46) ಶ. ಶಾಂತಸಂವಿತಾಯನಮಃ, 47) ಷ. ಷಡ್ಗುಣಾತ್ಮಾಯನಮಃ, 48) ಸ. ಸಾರಾತ್ಮಾಯನಮಃ, 49) ಹ. ಹಂಸಾಯನಮಃ, 50) ಳ. ಳಾಳುಕಾಯನಮಃ 51) ಕ್ಷ. ಲಕ್ಷ್ಮೀನರಸಿಂಹಾಯನಮಃ

### ವಿಷ್ಣುಪಂಚಕವ್ರತ :

ಭಾದ್ರಪದ ಮಾಸ ಅಥವಾ ಮಾರ್ಗಶೀರ್ಷ ಮಾಸದಲ್ಲಿ 'ಏಕತಿಥಿ' ಯೋಗ ಬರುತ್ತದೆ. ಏಕತಿಥಿ ಅಂದರೆ 5 ಉಪವಾಸದ ದಿನಗಳನ್ನು ಮಾಡುವದು. ಅಂದರೆ ಒಂದು ತಿಂಗಳಲ್ಲಿ ಬರುವ ಎರಡು ಏಕಾದಶಿಗಳು + ಹುಣ್ಣಿಮೆ + ಅಮವಾಸ್ಯ + ಶ್ರವಣಾ ನಕ್ಷತ್ರ ಇದ್ದ ದಿನ ಒಟ್ಟು(5 ದಿನಗಳು)ಗಳು ಆಗಿರುತ್ತದೆ. ಹೀಗೆ ತಿಂಗಳಿಗೆ 5 ದಿನ ಉಪವಾಸದಂತೆ 1 ವರ್ಷದಲ್ಲಿ ಒಟ್ಟು 60 ಉಪವಾಸ ದಿಗಳು ಬರುತ್ತವೆ. ಉಪವಾಸದ ಮರುದಿನ ಪಾರಣಿ ಮಾಡಬೇಕಷ್ಟೇ ! ಆ ದಿನ ದಂಪತ್ತು ಭೋಜನ ಮಾಡಿಸಬೇಕು. ಹೀಗೆ ವರ್ಷದಲ್ಲಿ ಉಪವಾಸದ ಮರುದಿನ ಬರುವ ಪಾರಣೆಗಳನ್ನು ಮಾಡಿ ಮುಗಿಸಿ ಉದ್ಯಾಪನ ಮಾಡಬೇಕು. ಪಾರಣೆ ದಿನ ದಂಪತ್ತುಗಳು ದೊರಕದಿದ್ದಲ್ಲಿ ಉದ್ಯಾಪನೆ ದಿನದಂದು 60 ದಂಪತ್ತು ಭೋಜನ

[illegible] ಕನಿಷ್ಠ 5 ದಂಪತ್ತುಗಳಿಗೆ ಸೀರೆ ಧೋತರ ಕೊಡಬೇಕು. 5 ಮರದ ಬಾಗಿಣ [illegible] ಉಳಿದ ದಂಪತಿಗಳಿಗೆ ಕಾಯಿ-ಖಣ ಕೊಡಬೇಕು. ಪಾರಣೆ ದಿನ 12 [illegible] ತಪ್ಪದೇ ಕೊಡಬೇಕು. ವ್ರತವನ್ನು ಪುಣ್ಯಾಹವಾಚನೆ ಮಾಡಿಸಿಕೊಂಡೇ [illegible].

[illegible] ವ್ರತದಲ್ಲಿ ಅರ್ಘ್ಯ ಕೊಡಬೇಕಾದಾಗ ಹೇಳಬೇಕಾದ ದೇವತೆಗಳ ನಾಮಗಳು -

1) ಶುದ್ಧ ದ್ವಾದಶಿ ದಿನ :

ಕೇಶವಾಯನಮಃ ................................ ದಾಮೋದರಾಯನಮಃ ( 12) ಇದಮರ್ಘ್ಯಂ ಸಮರ್ಪಯಾಮಿ.

2) ಕೃಷ್ಣಪಕ್ಷ ದ್ವಾದಶಿ ದಿವಸ :

ಸಂಕರ್ಷಣಾಯನಮಃ ................................ ಶ್ರೀಕೃಷ್ಣಾಯನಮಃ ( 12) ಇದಮರ್ಘ್ಯಂ ಸಮರ್ಪಯಾಮಿ.

3) ಪೌರ್ಣಿಮಾ ದಿವಸ :

[illegible], ಶಶಿನೆ, ಶಶಾಂಕಾಯ, ಚಂದ್ರಾಯ, ಸೋಮಾಯ, ಉಡುಪಾಯ, ಅಮೃತಾಯ, ಮನೋಹರಾಯ, ಪಾವನಾಯ, ಹಿಮಕೃತೆ, ನಿಶಾಕೃತೆ, ದೀಪಮಾನಾಯನಮಃ ( 12) ಇದಮರ್ಘ್ಯಂ ಸಮರ್ಪಯಾಮಿ.

4) ಅಮಾವಾಸ್ಯ ದಿವಸ :

ಮಹೀಧರಾಯ, ಜಗನ್ನಾಥಾಯ, ದೇವೇಂದ್ರಾಯ, ದೇವಕೀಸುತಾಯ, ಚತುರ್ಭುಜಾಯ, ಗದಾಪಾಣಯೆ, ಸುರಮೀಥಾಯ, ಸುಲೋಚನಾಯ, ಚಾರ್ವಾಂಗಾಯ, ಚಕ್ರಪಾಣಯೆ, ಸುರಮಿತ್ರಾಯ, ಅಸುರಾಂತಕಾಯನಮಃ (12) ಇದಮರ್ಘ್ಯಂ ಸಮರ್ಪಯಾಮಿ.

5 ಶ್ರವಣಾ ನಕ್ಷತ್ರದಲ್ಲಿ :

ಪುರುಷೋತ್ತಮಾಯ । ಶಾಂರ್ಙ್ಗಧನ್ವಿನೆ । ಗರುಡಧ್ವಜಾಯ । ಅನಂತಾಯ । ಗೋವರ್ಧನಾಯ । ಪುಂಡರೀಕಾಕ್ಷಾಯ । ನಿತ್ಯಾಯನಮಃ ವೇದಗರ್ಭಾಯನಮಃ ಯಜ್ಞಸ್ವರೂಪಾಯನಮಃ । ಸುಬ್ರಹ್ಮಣ್ಯಾಯ । ಜಯಾಯ । ಸೌರಯೇನಮಃ । ( 12) ಇದಮರ್ಘ್ಯಂ ಸಮರ್ಪಯಾಮಿ.

## ಅಧಿಕ ಮಾಸ :

ಅಧಿಕ ಮಾಸಕ್ಕೆ 'ಪುರುಷೋತ್ತಮನು' ನಿಯಾಮಕ ದೇವತೆ. ಇದಕ್ಕೆ 'ಮಲಮಾಸ'ವೆಂತಲೂ ಹೆಸರು. ಯಾವ ಮಾಸದಲ್ಲಿ ಪ್ರತಿಪದೆಯಿಂದ ಅಮಾವಾಸ್ಯೆ ವರೆಗೂ ಯಾವುದೇ ರಾಶಿಯಲ್ಲಿ ಸೂರ್ಯ-ಸಂಕ್ರಮಣ ಇರುವದಿಲ್ಲವೋ ಆ ಮಾಸಕ್ಕೆ ಅಧಿಕಮಾಸವೆನ್ನುತ್ತಾರೆ. ಈ ಮಾಸವು ಸಿಂಹ ಸಂಕ್ರಮಣದ ನಂತರ ಬಂದುದರಿಂದ ಪೂರ್ತಿ ಪಕ್ಷದ ನಿಯಮಾನುಸಾರವಾಗಿಯೂ ಅಧಿಕ ಮಾಸವೆನಿಸಿ ಕೊಳ್ಳುತ್ತದೆ. ಅಧಿಕಮಾಸದಲ್ಲಿ ಸ್ತ್ರೀ-ಪುರುಷರು ನಿತ್ಯ ನೈಮಿತ್ತಿಕ ಧರ್ಮ ಕಾರ್ಯಗಳನ್ನು ತಪ್ಪದೇ ಮಾಡಬೇಕು. ಪ್ರತಿ ಸಾಂವತ್ಸರಿಕ ಶ್ರಾದ್ಧ ಕರ್ಮವನ್ನು ಆ ಆ ತಿಥಿಗಳಲ್ಲಿ ಮಾಡುವದಲ್ಲದೇ ಅಧಿಕ ಮಾಸದಲ್ಲಿಯೂ ಶ್ರಾದ್ಧಾದಿಗಳನ್ನು ಮಾಡಬೇಕು. ಅಧಿಕ ಮಾಸದಲ್ಲಿ ಹಾಗೂ ಚಾತುರ್ಮಾಸದಲ್ಲಿ ಆಚರಿಸುವ ಧರ್ಮಕಾರ್ಯಗಳಿಗೆ ವಿಶೇಷ ಫಲವುಂಟು.

ಅಪೂಪ (ಅತಿರಸ-ಅನರಸ) ದಾನ ಅಧಿಕ ಮಾಸದಲ್ಲಿ ಮಹತ್ವವಾಗಿದೆ.

ಅಷ್ಟವಸುಗಳು (8) ಏಕಾದಶರುದ್ರರು (11) ದ್ವಾದಶಾದಿತ್ಯರು (12) ಪ್ರಜಾಪತಿ (1) ಮತ್ತು ವಷಟ್‌ಕಾರ (1), ಒಟ್ಟು 33 ದೇವತೆಗಳ ಅಂತರ್ಗತ ಮುಖ್ಯ ಪ್ರಾಣಾಂತರ್ಗತ ಶ್ರೀ ಹರಿಯ ಪ್ರೀತ್ಯರ್ಥ 33 ಸಂಖ್ಯೆಯಲ್ಲಿ ಅಪೂಪ (ಅನರಸ)ಗಳನ್ನು ದಾನ ಮಾಡಬೇಕು. (ದಕ್ಷಿಣೆ ಸಹಿತ). ದೇವರ ಇದಿರುಗಡೆಯಲ್ಲಿ ಮಂಡಳ ಮಾಡಿ ಅದರ ಮೇಲೆ ತಮ್ಮ ಯೋಗ್ಯತೆಗೆ ಅನುಸರಿಸಿ (ಕಬ್ಬಿಣ ಹೊರ್ತಾಗಿ) ಪಾತ್ರೆಯಲ್ಲಿ,

1. ದ್ರೋಣಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಪದ್ಮಿಪತಿ ವಿಷ್ಣವೇ ನಮಃ
2. ಧ್ರುವಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಪದ್ಮಿಪತಿ ವಿಷ್ಣವೇ ನಮಃ
3. ದೋಷಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಪದ್ಮಿಪತಿ ಮಹಾವಿಷ್ಣವೇ ನಮಃ
4. ಅರ್ಕಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸುಶೀಲಾಪತಿ ಹರಯೇ ನಮಃ
5. ಅಗ್ನ್ಯಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸುಲಕ್ಷಣಾಪತಿ ಶ್ರೀ ಕೃಷ್ಣಾಯ ನಮಃ
6. ದ್ಯ್ವಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಶ್ರೀಪತಿ ಕೇಶವಾಯ ನಮಃ
7. ಪ್ರಾಣಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಪ್ರಜ್ಞಾಪತಿ ಅಧೋಕ್ಷಜಾಯ ನಮಃ
8. ವಿಭಾವಸ್ವಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಕಮಲಾಪತಿ ಮಾಧವಾಯ ನಮಃ
9. ಭೀಮಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸೀತಾಪತಿ ಶ್ರೀರಾಮಾಯ ನಮಃ
10. ರೈವತಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸುಗಂಧಾಪತಿ ಪುರುಷೋತ್ತಮಾಯ ನಮಃ

11. ಓಜಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಆನಂದಾಧಿಪತಿ ಪುರುಷೋತ್ತಮಾಯ ನಮಃ

12. ಅಜೈಕಪಾದಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಪದ್ಮಾವತಿಪತಿ ಗೋವಿಂದಾಯ ನಮಃ

13. ಮಹಾನಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ವೃಷಾಕಪಿವಾಮನಾಯ ನಮಃ

14. ಬಹು ರೂಪಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಶ್ರೀಪತಿ ಶ್ರೀಶಾಯ ನಮಃ

15. ಭವಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ವಿಶ್ವಸಾಕ್ಷಿಣೇ ನಮಃ

16. ವಾಮದೇವಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ವಿಶ್ವಸಾಕ್ಷಿಣೇ ನಮಃ

17. ಉಗ್ರಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ನಾರಾಯಣಾಯ ನಮಃ

18. ವೃಷಾಕಪ್ಯಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಕಮಲಾಪತಿ ಮಧುಸೂಧನಾಯ ನಮಃ

19. ಅಹಿರ್ಬುಧ್ನ್ಯಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ನಿತ್ಯಾಪತಿ ಅನಿರುದ್ಧಾಯ ನಮಃ

20. ವಿವಸ್ವಾನಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ರಮಾಪತಿ ತ್ರಿವಿಕ್ರಮಾಯ ನಮಃ

21. ಅರ್ಯಮಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಹರಣೀಪತಿ ವಾಸುದೇವಾಯ ನಮಃ

22. ಪೂಷಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀ ಜಗದ್ಯೋನಯೇ ನಮಃ

23. ತ್ವಷ್ಟ್ರಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀ ಅನಂತಾಯ ನಮಃ

24. ಸವಿತ್ರಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀ ಶೇಷಶಾಯಿನೇ ನಮಃ

25. ಭಗಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಹಿರಣ್ಯಾಪತಿ ಸಂಕರ್ಷಣಾಯ ನಮಃ

26. ಧಾತ್ರಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸತ್ಯಾಪತಿ ಪ್ರದ್ಯುಮ್ನಾಯ ನಮಃ

27. ಪರ್ಜನ್ಯಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ದೈತ್ಯಾರಯೇ ನಮಃ

28. ವರುಣಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ವಿಶ್ವಾತ್ಮನೇ ನಮಃ

29. ಮಿತ್ರಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಕಂಸದಮನಾಯ ನಮಃ

30. ಶಕ್ರಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀ ವಿಶ್ವತೋಮುಖಾಯ ನಮಃ
31. ಉರುಕ್ರಮಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಸುಂದರೀಪತಿ ಜನಾರ್ದನಾಯ ನಮಃ
32. ಪ್ರಜಾಪತ್ಯಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀಧರ ವ್ಯಾಸಾಯ ನಮಃ
33. ವಷಟ್ಕಾರಾಂತರ್ಗತ "ಭಾರತೀರಮಣ ಮುಖ್ಯಾಂತರ್ಗತ" ಲಕ್ಷ್ಮೀಪತಿ ಶ್ರೀಪತಯೇ ನಮಃ

ಮೇಲೆ ಕಾಣಿಸಿದಂತೆ ಅಧಿಕಮಾಸದಲ್ಲಿ ದಾನ ಕೊಡುವ ಪೂರ್ವದಲ್ಲಿ 33 ದೇವತಾ ನಾಮಗಳನ್ನು ಉಚ್ಚರಿಸುತ್ತಾ 33 ಅಪೂಪಗಳನ್ನು ಇಡಬೇಕು. ಪ್ರತಿ ನಾಮ ಉಚ್ಚಾರಣೆ ನಂತರ ಶ್ರೀ ಲಕ್ಷ್ಮೀನರಸಿಂಹಾಯನಮಃ ಎಂದು ಹೇಳಬೇಕು. ನಂತರ ಅದರ ಮೇಲೆ ಮತ್ತೊಂದು ಮುಚ್ಚಳ, ಪಾತ್ರೆಯಾಗಲಿ, ಊಟಮಾಡುವ ಎಲೆ ಆಗಲಿ ಮುಚ್ಚಿ ಈ ರೀತಿ ಸಂಕಲ್ಪ ಮಾಡಬೇಕು. "ಸಂಕಲ್ಪ, ವಸುರುದ್ರಾದಿತ್ಯಾದಿತ್ರಯ ಸ್ತ್ರಿಂಶದ್ದೇವತಾಂತರ್ಗತ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಮಾಸ ನಿಯಾಮಕ ಶ್ರೀ ಪುರುಷೋತ್ತಮ ಪ್ರೇರಣಯಾ ನಿಖಿಲ ಪಾಪ ಪ್ರಶಮನ ಪೂರ್ವಕ ಪುತ್ರ, ಪೌತ್ರ ಸಹಿತ, ಧನಧಾನ್ಯ ಕ್ಷೇಮಾಭಿವೃದ್ಧಿ ಪ್ರಾಪ್ತ್ಯರ್ಥಂ ಲೋಕದ್ವಯ ಸುಖ ಹೇತು ವೃಧ್ಧಿ (ಭೂ) ದಾನಫಲ ಪ್ರಾಪ್ತ್ಯರ್ಥಂ ಅಪೂಪ ಛಿದ್ರ ಸಮಸಂಖ್ಯ ವರ್ಷ ಸಹಸ್ರಾವಧಿ ಸ್ವಲೋಕ ನಿವಾಸ ಸಿದ್ಧ್ಯರ್ಥಂ, ಜ್ಞಾನ ಭಕ್ತಿ ವೈರಾಗ್ಯ ಭಗವತ್ಪರಮಾನುಗ್ರಹಾದಿ ಕಲ್ಪೋಕ್ತ ಫಲಪ್ರಾಪ್ತ್ಯರ್ಥಂ ಮಲಮಾಸ ಅಧಿಕಮಾಸ ಪ್ರಯುಕ್ತ ಅಪೂಪದಾನಮಹಂ ಕರಿಷ್ಯೇ।" – ಹೀಗೆ ಮಂತ್ರ ಹೇಳಿ ಮಂತ್ರಾಕ್ಷತೆ ನೀರನ್ನು ಬಿಡಬೇಕು. ನಂತರ ದಾನ ಸ್ವೀಕರಿಸುವ ಬ್ರಾಹ್ಮಣರನ್ನು ಮಣೆ ಹಾಕಿ ಕೂರಿಸಿ ಅರ್ಘ್ಯ-ಪಾದ್ಯ ಆಚಮನೀಯ, ಗಂಧ, ಮಾಲ್ಯ, ವಸ್ತ್ರ, ಧೂಪ, ದೀಪಾದಿಗಳಿಂದ ಅವರನ್ನು ಪೂಜಿಸಿ, ಅವರ ಇದಿರು ಮಂಡಲ ಮಾಡಿ ಸೂರ್ಯಾಂತರ್ಗತ ವಿಷ್ಣುವನ್ನು ಪ್ರಾರ್ಥಿಸಿ ದಾನದ ಅಪೂಪ ಪಾತ್ರೆಯನ್ನು ಇಟ್ಟು ಇದಂ ಸೋಪಸ್ಕರಂ ತ್ರಯತ್ರಿಂಶತ್ ಅಪೂಪ ವಾಯನದಾನಂ ಸದಕ್ಷಿಣಾಕಂ ತುಭ್ಯಮಹಂ ಸಂಪ್ರದದೆ ನಮಮ, ನಮಮ ಎಂದು ಹೇಳಿ ಬ್ರಾಹ್ಮಣನಿಗೆ ಅರ್ಪಿಸಬೇಕು ಹಾಗೂ ಅನೇನ ದಾನೇನ ವಸುರುದ್ರ ಆದಿತ್ಯಪ್ರಜಾಪತಿ ವಷಟ್ಕಾರಾಂತರ್ಗತ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಮಾಸ ನಿಯಾಮಕ ಶ್ರೀ ಪುರುಷೋತ್ತಮಃ ಪ್ರೀಯತಾಂ ಪ್ರಿತೋ ಭವತು। ಶ್ರೀ ಕೃಷ್ಣಾರ್ಪಣಮಸ್ತು।। ಅಂತಾ ಮಂತ್ರಾಕ್ಷತೆ ನೀರು ಬಿಡಬೇಕು.

ದಾನವನ್ನು ಸ್ವೀಕರಿಸಿದ ಬ್ರಾಹ್ಮಣನು "ತ್ವಯಾ ದತ್ತಮಿದಂ ಪಾತ್ರಂಪರಮಾನ್ನೇನ ಪೂರಿತಮ್। ಸಘೃತಂ ಪ್ರತಿ ಗೃಹ್ಣಾಮಿ ಪ್ರೀಯತಾಂ ತೇ ದಿವಾಕರಃ।" ಅಂತಾ ಹೇಳಿ ದಾನವನ್ನು ಸ್ವೀಕರಿಸಬೇಕು.

ದಾನದ ಫಲ : ಈ ಅಪೂಪ ದಾನದಿಂದ ಪುತ್ರ-ಪೌತ್ರ ಹಾಗು ವಿಪುಲ ಸಂಪತ್ತು ಪ್ರಾಪ್ತವಾಗುತ್ತವೆ. ಅಲ್ಲದೆ ಈ ಮಾಸದಲ್ಲಿ ನಿತ್ಯವೂ ತಾಂಬೂಲ ಕೊಟ್ಟರೆ ಸೌಭಾಗ್ಯಪ್ರಾಪ್ತಿ, ದೇವರ ಮುಂದೆ ತುಪ್ಪದ ನಂದಾದೀಪವಿಟ್ಟರೆ ಸಂಪತ್ತು ಪ್ರಾಪ್ತಿ, ಗಂಗಾಸ್ನಾನ ಮಾಡಿದರೆ ಪಾಪ ಪರಿಹಾರ, ಮೌನದಿಂದ ಉಂಡರೆ ಪಾಪ ಪರಿಹಾರ. ಹೀಗೆ ದಾನವನ್ನು ಸ್ತ್ರೀಯರು ತಮ್ಮ ಪತಿಯ ಮುಖಾಂತರ ಬ್ರಾಹ್ಮಣರಿಗೆ ಪೂಜೆ ಮಾಡಿಸಬೇಕು.

ಅನರಸ (ಅಪೂಪ) ಮಾಡುವ ಕ್ರಮ — ಅರ್ಧಕಿಲೋ ದಪ್ಪಅಕ್ಕಿ, ಒಂದು ದಿನ ಮಾತ್ರ ನೀರಲ್ಲಿ ನೆನೆಸಬೇಕು. 24 ತಾಸಿನ ನಂತರ ನೀರನ್ನು ಬಸಿದು ಬಿಳಿ ಅರಿವೆ ಮೇಲೆ ಒಣಗಲು ಹಾಕಬೇಕು. ಸ್ವಲ್ಪ ಹಸಿ ಇರುವಾಗಲೇ ಕುಟ್ಟಿ ಸಣ್ಣಾಗುವಂತೆ ಮಾಡಬೇಕು. ಅರ್ಧ ಕಿಲೋ ಹಿಟ್ಟಿಗೆ ಅರ್ಧ ಕಿಲೋ ಸಕ್ಕರೆ ಬೆರೆಸಬೇಕು. 4-5 ದಿನಗಳ ನಂತರ ಈ ಹಿಟ್ಟಿಗೆ ಬಾಳೆಹಣ್ಣು ಕೂಡಿಸಿ (ಚಪಾತಿ ಹಿಟ್ಟಿನಂತೆ) ನಾದಿ ಇಟ್ಟುಕೊಂಡು ತಮಗೆ ಬೇಕಾದ ಅಳತೆಗೆ ತಕ್ಕಂತೆ ಹಿಟ್ಟು ತೆಗೆದುಕೊಂಡು ಬಾಳೆ ಎಲೆ, ಅಥವಾ ಪ್ಲಾಸ್ಟಿಕ್ ಹಾಳೆ ಮೇಲೆ ದುಂಡಗೆ ಕೈಯಿಂದ ತಟ್ಟಿ ತುಪ್ಪದಲ್ಲಿ ಕರೆಯಬೇಕು. ಕರೆಯುವಾಗ ಸಣ್ಣಾದ ಉರಿ ಇರಬೇಕು. ಕರೆದು ತೆಗೆದು ಮೇಲೆ ಗಸಗಸೆ ಉದುರಿಸಬೇಕು.

ವಿ.ವಿ.: ಚಾತುರ್ಮಾಸದಲ್ಲಿ ಬರುವ ಯಾವತ್ತೂ ನಿಯಮಗಳನ್ನು ಪಾಲಿಸಿದಲ್ಲಿ ವಿಶೇಷ ಪುಣ್ಯವಿದೆ. ಶ್ರವಣಾ ಬಂದಿದ್ದರೆ ಅಂದು ಉಪವಾಸ ಮಾಡಬೇಕು.

**ರಂಗವಲ್ಲಿ ಮಹತ್ವ :**

ಬಾಗಿಲ ಹೊರಗಡೆ ತಲೆಬಾಗಿಲಲ್ಲಿ ಕಸ ತೆಗೆದು ಆಕಳು ಶಗಣಿಯಿಂದ ಸಾರಿಸಿ ಹೊಸ್ತಿಲ ತೊಳೆದು ಕೆಂಪುಬಣ್ಣ ಹಚ್ಚಿ ರಂಗವಲ್ಲಿ ಹಾಕಬೇಕು. ರಂಗಾವಲಿ ಅನ್ನುವದೇ ಇದರ ಮರ್ಮ. ಕಾರಣ ಪರಮಾತ್ಮನ ಗುಣ ರೂಪ ಕ್ರಿಯೆಯನ್ನು ಸ್ಮರಿಸಿಕೊಂಡು ಸುಂದರ ನಕ್ಷೆ ತೆಗೆಯಬೇಕು. ಹೊಸ್ತಿಲಕ್ಕೆ ನಾಲ್ಕು ನಾಲ್ಕು ಎಳೆಯಂತೆ ಆರು ಭಾಗ ಮಾಡಿ ಬರೆಯಬೇಕು. ಅಂದರೆ ನಡುವೆ ಸ್ವಲ್ಪ ಸ್ವಲ್ಪ ಅಂತರದಲ್ಲಿ ಬಿಟ್ಟು 24 ಎಳೆಗಳನ್ನು ಹೊಸ್ತಿಲಕ್ಕೆ ಬರೆಯಬೇಕು. ಮಧ್ಯದ ಸ್ಥಳದಲ್ಲಿ ಚಕ್ರ, ಶಂಖಮುದ್ರೆ, ಶ್ರೀ ಹಾಕಿ, ಎಡಕ್ಕೆ ಬಲಕ್ಕೆ ಜಿಲೇಬಿಯಂತೆ ಹಾಕಬೇಕು. ಹೊಸ್ತಿಲ ತಳಗೆ ಎರಡು ಎಳೆ ಎಳೆಯಬೇಕು. ಮಧ್ಯದ 8 ಎಸಳುಳ್ಳ ಕಮಲ ಬಿಡಿಸಬೇಕು.

ಹೊಸ್ತಿಲಕ್ಕೆ ಶ್ರೀ ಲಕ್ಷ್ಮೀನರಸಿಂಹ ದೇವರು ಅಭಿಮಾನಿ ದೇವತೆಗಳು ಇದ್ದ ಕಾರಣ ರಂಗವಲ್ಲಿ ಬರೆದು ಆದ ಮೇಲೆ ಅರಿಷಿಣ-ಕುಂಕುಮ ಏರಿಸಬೇಕು. ಅದರಂತೆ ಬಾಗಿಲ ಇದಿರಲ್ಲಿರುವ ತುಲಸೀ ಕಟ್ಟೆಯಿದಿರು ಸಾರಿಸಿ ರಂಗವಲ್ಲಿ ಹಾಕಿ ಕುಂಕುಮ ಏರಿಸಬೇಕು. ಅಂದರೆ ತುಲಸೀ-ದಾಮೋದರನು ರಂಗವಲ್ಲಿ ಹಾಕಿದವರಿಗೆ ಸಕಲ ಸೌಭಾಗ್ಯವನ್ನು ಕೊಟ್ಟು ಸಂರಕ್ಷಿಸುವನು. ಹೀಗೆ ಸೂರ್ಯೋದಯಕ್ಕೆ ರಂಗವಲ್ಲಿ ಹಾಕುವದರಿಂದ ಲಕ್ಷ್ಮೀನರಸಿಂಹ

ದೇವರು ದುಷ್ಟ ಶಕ್ತಿಗಳು ಮನೆ ಒಳಗೆ ಬರದಂತೆ ಮಾಡಿ ನಮ್ಮನ್ನು ಸದಾ ಸಂರಕ್ಷಣೆ ಮಾಡುತ್ತಾರೆ.

ತುಲಸೀ ಕಟ್ಟೆಯ ಮುಂದೆ ರಂಗವಲ್ಲಿ ಹಾಕುವಾಗ "ಪ್ರಸೀದ ತುಲಸೀ ದೇವಿ, ಪ್ರಸೀದ ಹರಿವಲ್ಲಭೆ, ಕ್ಷೀರೋದ್‌ಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಂ ತುಲಸೀ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ನಮಾಮಿ ನಾರದಾನುತೇ ನಾರಾಯಣನಮಃ ಪ್ರಿಯೇ" ಅಂತಾ ಹೇಳಿ ತುಳಸಿಗೆ ಕುಂಕುಮ ಹಚ್ಚಬೇಕು. ಹಾಗೂ ಮಂಗಳ ಸೂತ್ರಕ್ಕೆ ಕುಂಕುಮ ಏರಿಸಿ ತಾಳಿಯನ್ನು ಕಣ್ಣಿಗೆ ಹಚ್ಚಿಕೊಳ್ಳಬೇಕು. "ಕಾತ್ಯಾಯನಿ ಮಹಾಮಾಯೆ ಮಹಾ ಯೋಗೇಶ್ವರೀ ನಂದಗೋಪ ಸುತಂ ದೇಹಿ ಪತಿತನ್ ಕುರುತೇ ನಮಃ" ಅಂತಾ ಹೇಳಬೇಕು. ನಂತರ ಅಂಗಳದಲ್ಲಿ ಸೂರ್ಯ ನಾರಾಯಣನಿಗೆ ರಂಗವಲ್ಲಿ ಹಾಕಿ ಪತ್ಯಂತರ್ಗತ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಭೂದೇವಿ ತಾಯಿ, ನಿನ್ನನ್ನು ತುಳಿಯುತ್ತೇವೆ. ಹೊಲಸು ಮಾಡುತ್ತೇವೆ. ಅವೆಲ್ಲವನ್ನೂ ಮನ್ನಿಸಿ ನಮ್ಮನ್ನು ಉದ್ಧಾರ ಮಾಡಮ್ಮಾ ! ನಿನಗೆ ಮತ್ತು ನಿನ್ನ ಪತಿ ಶ್ರೀ ವರಾಹ ಮೂರ್ತಿಗೆ ಸಾಷ್ಟಾಂಗ ಪ್ರಣಾಮಗಳು !!

ಹೀಗೆ ಸ್ತೋತ್ರ ಮಾಡುವಾಗ ಪರಮಾತ್ಮನು ಹಾಕಿಕೊಟ್ಟ ದಾರಿಯಲ್ಲಿ ನಡೆಯುವದು ಅವಶ್ಯವಲ್ಲವೇ ? ವಿವಾಹಿತ ಸ್ತ್ರೀಯರು ಈ ನಿಯಮಗಳನ್ನು ಆಚರಿಸುವಾಗ ಮಡಿಯಿಂದ 9 ವಾರ ಸೀರೆಯನ್ನು ಕಚ್ಚೆ ಸಹಿತವಾಗಿ ಉಟ್ಟುಕೊಂಡು ಗದಿ-ಕುಂಕುಮ ಹಚ್ಚಿಕೊಂಡು ಗುರುಮಂತ್ರ ಹೇಳಿಕೊಳ್ಳುವದನ್ನು ಮರೆಯಬಾರದು. ಹೀಗೆ ಮಾಡಿದಲ್ಲಿ ಮಾತ್ರ ಯಾವುದೇ ವ್ರತ ನಿಯಮಗಳನ್ನು ಆಚರಿಸಿದರೂ ವಿಶೇಷ ಫಲ ಪ್ರಾಪ್ತಿಯಾಗುತ್ತದೆ.



# ವಿಶೇಷ ಸೂಚನೆ

ಈ ಕೆಳಗೆ ಬರೆದಂತೆ ಓದಿಕೊಳ್ಳಬೇಕು.

**ಕಾರ್ತಿಕ ಸ್ನಾನ**

ಆಶ್ವಿನ ಮಾಸದ ಹುಣ್ಣಿವೆ.................................

......................................................... ದೀಪದಾನೇನ ತ್ರಯೋದಶ್ಯಾಂ

ಸಧರ್ಮರಾದ್''॥

ಎರಡು ನಕ್ಷತ್ರ ದೀಪವನ್ನು (ಹನ್ನೊಂದು ಎಳೆ ತೆಗೆದು ಐದು ಕುಸುರು ಮಾಡಿ) ಕೃತ್ತಿಕಾ ನಕ್ಷತ್ರದ ಹೆಸರಿನಿಂದ ಹಚ್ಚಬೇಕು. ಈ ನಕ್ಷತ್ರ ಪ್ರತಿದಿನ ಉಷಃಕಾಲದಲ್ಲಿ ಒಂದು ತಿಂಗಳು ಮಾತ್ರ ಇರುತ್ತದೆ.

**ಉತ್ಥಾನ ದ್ವಾದಶಿ**

''ಕಾರ್ತಿಕಶು॥ದ್ವಾದಶಿ...........................

.......................................... ಉತ್ಥಾನ ದ್ವಾದಶಿ ದಿವಸ ನಡೆಯುತ್ತದೆ''

(ಐದು ಎಳೆಗಳಿಂದ ಕೂಡಿದ ೫ಳ ಬತ್ತಿಯಂತೆ ಎರಡು ಜತೆ ಬತ್ತಿಗಳ (ಹಕ್ಕಿಗಳು ಗೂಡು ಸೇರುವ ಹೊತ್ತಿಗೆ) ಹಚ್ಚಿ ಹೊರಗೆ ಇಡಬೇಕು.)

ಒಂದು ವರ್ಷ ನಾವು ಸಂಸಾರವೆಂಬ ಹಾವಿನೊಡನೆ ಕಳೆದೆವು ಅನ್ನುವ ದ್ಯೋತಕವಾಗಿ ವೈಕುಂಠ ಚತುರ್ದಶಿ ದಿವಸ ೩೬೫ ಎಳೆಯಿಂದ ಕೂಡಿ ೧ ಗೇಣು ಉದ್ದದ ಬತ್ತಿಯನ್ನು ಮಾಡಿ ಒಂದು ತುದಿ ಹಾವಿನ ಹೆಡೆಯಂತೆ ಮಾಡಿ ಇನ್ನೊಂದು ತುದಿ ಬಾಲದಂತೆ ಮಾಡಿ ಬೆಳಿಗ್ಗೆ ದೀಪ ಹಚ್ಚಿಡಬೇಕು.

# ಕೆಲವು ಮಹತ್ವದ ಸಂಗತಿಗಳು

**ಋಷಿ ಪಂಚಮಿ ಆಚರಿಸುವ ಮೊದಲು ಈ ಕೆಳಗೆ ಕಾಣಿಸಿದ ದೋಷಗಳ ಪರಿಹಾರಾರ್ಥವಾಗಿ ಸಂಕಲ್ಪ ಮಾಡಬೇಕಾದ್ದು ಹೀಗಿದೆ.**

೧) ಪ್ರಥಮ ರಜೋದರ್ಶಕಾಲೆ - ಅನ್ಯಜನ ದೃಷ್ಟಿದೋಷ ನಿವಾರಣಾರ್ಥಂ

೨) ಮಾಸೆ ಮಾಸೆ ಪ್ರಥಮ ದಿನ ರಜೋತ್ಪತ್ತಿಕಾಲೇ ಮಲಿನ ದೇಹ ಪ್ರಾಪ್ತಿ ದೋಷ ಪರಿಹಾರಾರ್ಥಂ

೩) ದ್ವಿತೀಯ ದಿನೇ ರಜೋತ್ಪತ್ತಿ ಕಾಲೆ ದುಷ್ಟಗ್ರಹ ಆವಾಹನ ದೋಷ ಪರಿಹಾರಾರ್ಥಂ

೪) ತೃತೀಯ ದೀನೇ ರಜೋತ್ಪತ್ತಿ ಕಾಲೇ ಚಾಂಡಾಲತ್ವ ಪ್ರಾಪ್ತಿ ದೋಷ ಪರಿಹಾರಾರ್ಥಂ

೫) ಚತುರ್ಥಿ ದಿನೆ ರಜೋತ್ಪತ್ತಿ ಕಾಲೆ ಕುಲೀನ ಸ್ತ್ರೀ ದೋಷಪರಿಹಾರಾರ್ಥಂ

೬) ದಶದಿನಾದಿ ಪಕ್ಷಕಾಲ, ಋತುಕಾಲ, ನರಹತ್ಯಾ, ಶಿಶುಹತ್ಯಾ ಪರಿಹಾರಾರ್ಥಂ

೭) ರಜಸ್ವಲಾಸಮಯೇ ತಾಂಬೂಲ ಚರ್ವಣ ಪ್ರಾಯಶ್ಚಿತ್ತಾರ್ಥಂ

೮) ರಜಸ್ವಲಾಸಮಯೇ ಕುಸುಮಾಲಂಕಾರ ಪ್ರಾಯಶ್ಚಿತ್ತಾರ್ಥಂ

೯) ರಜಸ್ವಲಾಸಮಯೇ ಸುಗಂಧದ್ರವ್ಯಲೇಪನಾ ಪ್ರಾಯಶ್ಚಿತ್ತಾರ್ಥಂ

೧೦) ರಜಸ್ವಲಾಸಮಯೋ ನವವಸ್ತ್ರಧಾರಣ ಪ್ರಾಯಶ್ಚಿತ್ತಾರ್ಥಂ

೧೧) ರಜಸ್ವಲಾಸಮಯೇ ಅನ್ಯಪುರುಷ ಸಂಭಾಷಣಾ ಪ್ರಾಯಶ್ಚಿತ್ತಾರ್ಥಂ

೧೨) ರಜಸ್ವಲಾಸಮಯೇ ಬ್ರಾಹ್ಮಣ-ಸುವಾಸಿನಿ ಸಹದರ್ಶನ ಪ್ರಾಯಶ್ಚಿತ್ತಾರ್ಥಂ

೧೩) ರಜಸ್ವಲಾ ಸಮಯೇದೇವತಾದರ್ಶನದೋಷಪರಿಹಾರರ್ಥಂ

೧೪) ರಜಸ್ವಲಾಸಮಯೇ ಪರ್ಯಂಕಶಯನ ದೋಷ ಪರಿಹಾರಾರ್ಥಂ

೧೫) ರಜಸ್ವಲಾಸಮಯೆ ನದಿ, ವಾಪಿ, ಕೂಪೇಷು ಸ್ನಾನ ದೋಷ ಪರಿಹಾರಾರ್ಥಂ

೧೬) ರಜಸ್ವಲಾಸಮಯೇ ಪಂಕ್ತಿಭೋಜನದೋಷ ಪರಿಹಾರಾರ್ಥಂ

೧೭) ರಜಸ್ವಲಾ ಸಮಯೇ ಕೇಶಾಲಂಕಾರ ಕೃತ ದೋಷಪರಿಹಾರಾರ್ಥಂ

೧೮) ರಜಸ್ವಲಾಸಮಯೆ ಜ್ಞಾತಾ-ಜ್ಞಾತ ದೋಷಪರಿಹಾರರ್ಥಂ

೧೯) ರಜಸ್ವಲಾಸಮಯೇ ಮೃಷ್ಟಾನ್ನ ಭೋಜನ ದೋಷಪರಿಹಾರಾರ್ಥಂ॥

(ಈ ಎಲ್ಲ ದೋಷ ಪರಿಹಾರಾರ್ಥವಾಗಿ ಸ್ತ್ರೀಯರಿಗೆ ಋಷಿಪಂಚಮಿವ್ರತವನ್ನು ಹೇಳಲಾಗಿದೆ)

# ದಿನಚರಿ ಬಗ್ಗೆ

ನಸುಕಿನಲ್ಲಿ ಎದ್ದಕೂಡಲೇ ಹರೇ ರಾಮ, ಹರೇ ರಾಮ ರಾಮ ರಾಮ ಹರೆ ಹರೆ ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ (ಇದನ್ನು ೮ ಸಾರಿ ಹೇಳಬೇಕು) ನಾರಾಯಣ ನಾರಾಯಣ ಅಂತ ೧೦೮ ಸಾರೆ ಅನ್ನಬೇಕು.

ನಂತರ

ದೇವರ ಮುಂದೆ ದೀಪ ಹಚ್ಚಿ ಆ ದೀಪದಿಂದ ದೇವರ ಮೂರ್ತಿಯನ್ನು ನೋಡಬೇಕು. ನಂತರ ಕನ್ನಡಿಯನ್ನು ನೋಡಿಕೊಂಡು (ಬಿಂಬ ಪ್ರತಿಬಿಂಬ) ನಮ್ಮ ಕುಂಕುಮ ಹಚ್ಚಿಕೊಂಡು ಬಾಚಿಕೊಳ್ಳಬೇಕು. ಆಮೇಲೆ ತುಳಸಿಗೆ ಕುಂಕುಮ ಹಚ್ಚಿ ದೇವರ ಮುಂದೆ ಕುಳಿತುಕೊಂಡು ಮಾನಸ ಪೂಜೆಯನ್ನು ಮಾಡಿಕೊಳ್ಳಬೇಕು.

**ಮಾನಸ ಪೂಜೆ**

ಇಳಾಪಿಂಗಳ ಸುಷುಮ್ನ ನಾಡಿ ದೇಹದಲ್ಲಿ ಇರುತ್ತದೆ. ಆದರೊಳಗೆ ಗಂಗಾ, ಯಮುನಾ, ಸರಸ್ವತಿ ಎಂಬ ನದಿಗಳು ಇರುತ್ತವೆಂದು ಅನುಸಂಧಾನ ಮಾಡಿಕೊಂಡು ನಾಡಿ ಸ್ನಾನ ಮಾಡಬೇಕು. ಪೂರ್ವಕ್ಕೆ ಮುಖ ಮಾಡಿ ಆಕಾಶವನ್ನು ನೋಡಬೇಕು. ಸೂರ್ಯ ಉದಯ ಆದ ನಂತರ ಸೂರ್ಯ ನಾರಾಯಣನ ಐಕ್ಯ ಚಿಂತನೆಯನ್ನು (ಇಬ್ಬರನ್ನೂ ಒಂದು ಮಾಡಿ) ಮಾಡಿ ಕೂಡಿಸಬೇಕು. ನಖದಿಂದ ಶಿಖದವರೆಗೆ ನಮಸ್ಕಾರ ಮಾಡಬೇಕು.

ನಖಕ್ಕೆ ಯಾಕೆ ನಮಸ್ಕಾರ ಮಾಡಬೇಕು ಅಂದರೆ, ಬಲಿಯು ಅಶ್ವಮೇಧಯಾಗ ಮಾಡಿದಾಗ ವಾಮನ ರೂಪಿ ಪರಮಾತ್ಮನಾಗಿ ಹೋಗಿ ಮೂರು ಪಾದ ಭೂಮಿ ಬೇಡಿದ. ಆಗ ತ್ರಿವಿಕ್ರಮ ರೂಪದಿಂದ ಒಂದು ಪಾದವನ್ನು ಆಕಾಶದಲ್ಲಿ ಇಟ್ಟಾಗ ನಖವು ಆಕಾಶ ಕರ್ಪರಕ್ಕೆ ತಾಕಿ ನೀರು ಹೊರಗೆ ಬಂದಿತು. ಆದನ್ನು ಬ್ರಹ್ಮದೇವರು ಕಮಂಡಲದಲ್ಲಿ ತುಂಬಿಕೊಂಡು ಅದರಲ್ಲಿ ತುಳಸಿ ದಳವನ್ನು ಹಾಕಿ ಪರಮಾತ್ಮನ ಪಾದವನ್ನು ತೊಳೆಯಲಾಗಿ ಆ ನೀರೆ ಗಂಗೆಯಾಗಿ ಭೂಲೋಕಕ್ಕೆ ಬಂದು ನಮ್ಮನ್ನು ಉದ್ಧಾರ ಮಾಡಿದಳು. ಇಂಥವಳನ್ನು ತಂದ ನಿನ್ನ ನಖಕ್ಕೆ ನಮಸ್ಕಾರ. ನಿನ್ನ ಪಾದಕ್ಕೆ ಶಂಖ, ಚಕ್ರ, ಗದಾ, ಪದ್ಮ ಅಲ್ಲದೆ ಅಹಲ್ಯೆಯನ್ನು ಉದ್ಧಾರ ಮಾಡಿದ ಪಾದಕ್ಕೆ ನಮಸ್ಕಾರ. ಹಿಂಬಡಕ್ಕೆ ಯಶೋದಾದೇವಿ ಗೆಜ್ಜೆ ಹಾಲ್ಗಡಕ ಪೈಜಣ ಹಾಕಿ ಸಂತೋಷಪಟ್ಟ ಹಿಂಬಡಗಳಿಗೆ ನಮಸ್ಕಾರ. ಗೋಕುಲದಲ್ಲಿ ಅಂಬೆಗಾಲಿಟ್ಟು ಆಡ್ಡಾಡಿದ ಮಂಡಿಗಳಿಗೆ ನಮಸ್ಕಾರ. ತೊಡೆಯಲ್ಲಿ ಲಕ್ಷ್ಮಿದೇವಿಯನ್ನು ಕೂಡಿಸಿಕೊಂಡಿರುವ ಮತ್ತು ಹಿರಣ್ಯಕಶ್ಯಪನನ್ನು ಮಲಗಿಸಿಕೊಂಡು ವಧೆ ಮಾಡಿದಂತಹ ನಿನ್ನ ತೊಡೆಗಳಿಗೆ ನಮಸ್ಕಾರ. ಯೋಶೋದೆಯಿಂದ ಹಗ್ಗವನ್ನು ಕಟ್ಟಿಸಿಕೊಂಡು ದಾಮೋದರವೆಂದು ಅನಿಸಿಕೊಂಡ ಕಟಿಗೆ

ನಮಸ್ಕಾರ. ನಾಭಿ ಕಮಲದಲ್ಲಿ ಬ್ರಹ್ಮ ದೇವರನ್ನು ಸೃಷ್ಟಿಸಿದ ನಿನ್ನ ನಾಭಿಗೆ ನಮಸ್ಕಾರ. ಪ್ರಳಯ ಕಾಲದಲ್ಲಿ ಎಲ್ಲ ಜೀವರಾಶಿಗಳನ್ನು ಉದರದಲ್ಲಿ ಇಟ್ಟುಕೊಂಡಿರುವಂತಹ ನಿನ್ನ ಉದರಕ್ಕೆ ನಮಸ್ಕಾರ. ಹೃದಯ ಕಮಲದಲ್ಲಿ ಲಕ್ಷ್ಮಿಗೆ ಸ್ಥಾನಕೊಟ್ಟಂತಹ ನಿನ್ನ ಹೃದಯಕ್ಕೆ ನಮಸ್ಕಾರ. ಶಂಖ, ಚಕ್ರ, ಗದಾ, ಪದ್ಮ ಧರಿಸಿರುವಂತಹ ಚತುರ ಹಸ್ತಗಳಿಗೆ ನಮಸ್ಕಾರ. ದುಷ್ಟರನ್ನು ಸಂಹಾರ ಮಾಡಿದ ನಿನ್ನ ಬಾಹುಗಳಿಗೆ ನಮಸ್ಕಾರ. ಶಂಖದೋಪಾದಿ ಇರುವ ಕಂಠಕ್ಕೆ ನಮಸ್ಕಾರ. ಲಕ್ಷ್ಮಿದೇವಿಯು ನ್ನಿ ಅಧರಾಮೃತ ಪಾನ ಮಾಡಿದ ನಿನ್ನ ಆಧರಕ್ಕೆ ನಮಸ್ಕಾರ. ಕುಂಡಲಗಳನ್ನು ಹಾಕಿಕೊಂಡಿರುವ ನಿನ್ನ ಕರ್ಣಕ್ಕೆ ನಮಸ್ಕಾರ. ಸಂಪಿಗೆ ಮೊಗ್ಗಿನಂತಿರುವ ನಿನ್ನ ನಾಸಿಕಕ್ಕೆ ನಮಸ್ಕಾರ. ಕಮಲದೋಪಾದಿದಂತಿರುವ ನಿನ್ನ ನೇತ್ರಗಳಿಗೆ ನಮಸ್ಕಾರ. ಕಾಮನಬಿಲ್ಲಿನಂತಿರುವ ನಿನ್ನ ಹುಬ್ಬಿಗೆ ನಮಸ್ಕಾರ. ಅಂಗಾರ ಅಕ್ಷತೆಯಿಂದ ಶೋಭಿಸುತ್ತಿರುವ ನಿನ್ನ ಹಣೆಗೆ ನಮಸ್ಕಾರ. ರತ್ನ ಖಚಿತವಾದ ಕಿರೀಟವನ್ನು ಹಾಕಿಕೊಂಡಿರುವ, ನಿನ್ನ ಶಿಖಿಕ್ಕೆ ನಮಸ್ಕಾರ. ಹೀಗೆ ಇಷ್ಟೆಲ್ಲ ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಂಡು ದೇವರಿಗೆ ನಮಸ್ಕಾರ ಮಾಡಬೇಕು.

### ರಂಗವಲ್ಲಿ ವಿಷಯ

ಹೊರಗಿನ ಬಾಗಿಲು (ಮುಂಚೆಬಾಗಿಲು) ಕಸ ಗೂಡಿಸಿ ಸಾರಿಸಿ ರಂಗವಲ್ಲಿ ಹಾಕಬೇಕು. ಹೊಸ್ತಿಲಕ್ಕೆ ನಾಲ್ಕು ಎಳೆಯಂತೆ ೬ ಕಡೆ ಹಾಕಬೇಕು. (ಐದು ಭಾಗವಾಗುತ್ತದೆ) ನಡುವಿನ ಭಾಗದಲ್ಲಿ ''ಶ್ರೀ''ಕಾರ ಹಾಕಿ ಎಡ ಬಲದಲ್ಲಿ ಶಂಖ, ಚಕ್ರ ಹಾಕಿ ಉಳಿದ ಎರಡು ಕಡೆಯಲ್ಲಿ ಜಿಲೇಬಿಯ ಬಳ್ಳಿಯಂತೆ ಹಾಕಬೇಕು. ''ಶ್ರೀ'' ಹಾಕಿದ ಕೆಳಗಡೆ ಎಂಟು ದಳ ಹಾಕಬೇಕು. ಅದಕ್ಕೆ ಅರಿಶಿಣ ಕುಂಕುಮ ಹಚ್ಚಿ ನಮ್ಮ ಕೊರಳಲ್ಲಿ ಇರುವ ತಾಳಿಗೂ ಅರಿಶಿಣ ಕುಂಕುಮ ಹಚ್ಚಿಕೊಂಡು ಕಣ್ಣಿಗೆ ತಾಳಿಯನ್ನು ಹಚ್ಚಿಕೊಳ್ಳಬೇಕು. ಅಷ್ಟದಳದಲ್ಲಿರುವಂತಹ ನರಸಿಂಹ ದೇವರೇ ದುಷ್ಟರನ್ನು ಸಂಹಾರ ಮಾಡಲು ಅವತಾರ ಮಾಡಿರುವಿರಿ, ನಮ್ಮಲ್ಲಿಯ ದುಷ್ಟತನವನ್ನು ಕಳೆದು ನಮ್ಮಲ್ಲಿ ದುಷ್ಟಜೀವಿಗಳು ನಮ್ಮ ಒಳಗೆ ಬರದಂತೆ ನಮ್ಮನ್ನು ಉದ್ಧಾರ ಮಾಡಬೇಕು. ನಮಗೆ ಮಾಂಗಲ್ಯ ಭಾಗ್ಯವನ್ನು ಕೊಡಬೇಕು ಎಂದು ಕೈ ಮುಗಿದು ಭೂಮಿಗೆ ರಂಗೋಲಿಯನ್ನು ಹಾಕಿ ಭೂದೇವಿ ಅಂತರ್ಗತ ವರಾಹದೇವರಿಗೆ ಸಮಸ್ಕರಿಸಬೇಕು. ನಂತರ ತುಳಸಿಗೆ ರಂಗವಲ್ಲಿ ಹಾಕಿ ಅರಿಶಿಣ ಕುಂಕುಮ ಹಚ್ಚಿ ''ಪ್ರಸೀದ ತುಲಸೀ ದೇವಿ ಪ್ರಸೀದ ಹರಿವಲ್ಲಭೇ।ಕ್ಷೀರೋದ ಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಂ''॥ ತುಲಸಿಶ್ರೀ ಸಖಿಶುಭೇ ಪಾಪಹಾರಿಣಿ ಪುಣ್ಯದೇ।ನಮಾಮಿ ನಾರದನುತೇ ನಾರಾಯಣ ಮನಃಪ್ರಿಯೇ'' ಅಂತಾ ಹೇಳಬೇಕು.

**ಸ್ನಾನ:** ಹೆರಳು ಹಾಕಿಕೊಂಡು ಸ್ನಾನ ಮಾಡಬೇಕು. ಗಂಗಾಳದಲ್ಲಿ ಎರಡು ತಂಬಿಗೆ ತಣ್ಣೀರನ್ನು ಹಾಕಿ, ಆಮೇಲೆ ಬಿಸಿ ನೀರು ಹಾಕಿ ಮತ್ತೆ ಎರಡು ತಂಬಿಗೆ ತಣ್ಣೀರನ್ನು ಹಾಕಿದರೆ ತಣ್ಣೀರು ಸ್ನಾನ ಮಾಡಿದಂತೆ ಆಗುತ್ತದೆ. (ತಣ್ಣೀರಿನ ಸ್ನಾನ ಸಾಧ್ಯವಾಗದಿದ್ದಲ್ಲಿ) ಸ್ನಾನ ಮಾಡುವಾಗ ಕಚ್ಚೆಯನ್ನು ಹಾಕಿಕೊಂಡು ಬ್ಲೌಜನ್ನು ಟೊಂಕದಲ್ಲಿ ಸಿಗಿಸಿಕೊಂಡು ಸ್ನಾನ ಮಾಡಬೇಕು.

ಮೊದಲು ಎರಡು ತಂಬಿಗೆ ನೀರನ್ನು ಹಾಕಿಕೊಂಡು ಸಂಕಲ್ಪ ಮಾಡಿಕೊಂಡು ಸ್ನಾನ ಮಾಡಬೇಕು. ನೀರಿಗೆ ಅರಿಶಿಣ ಕುಂಕು ಏರಿಸಿ ನಾವು ಕೂಡ ಕೈ ಕಾಲುಗಳಿಗೆ ಹಾಗೂ ಗಲ್ಲಕ್ಕೆ ಅರಿಶಿಣ ಹಚ್ಚಿಕೊಂಡು ಹಣೆಗೆ ಕುಂಕುಮ ಹಚ್ಚಿಕೊಂಡು, ''ನಲಿನಿ, ನಂದಿನಿ, ಸೀತಾ ಅನ್ನುತ್ತ ಕಿರುಬೆರಳಿನಿಂದ ನೀರನ್ನು ದುಂಡಗೆ ತಿರುಗಿಸಿ 'ಶ್ರೀ' ಬರೆದು ನಲಿನಿ, ನಂದಿನಿ, ಸೀತಾ, ಮಾಲತೀಚ ಮಲಾಪಹಾರಿ, ವಿಷ್ಣು ಪಾದಾಬ್ಜ ಸಂಭೂತೆ ಗಂಗೆ, ತ್ರಿಪದಗಾಮಿನಿ ಭಾಗೀರಥಿ ಭೋಗವತಿ, ಜಾನ್ಹವಿ ತ್ರಿಜೇಶ್ವರಿ ಯತ್ರ ಯತ್ರ ಸ್ನಾನಕಾಲೇ ಸ್ಮರೆನಿತ್ಯಮ್ ತತ್ರ ತತ್ರ ಜಲಾಶಯೇ'' ಅಂತಾ ಭಾಗೀರಥಿಯ ೧೨ ಹೆಸರುಗಳನ್ನು ಉಚ್ಛಾರ ಮಾಡಿದರೆ ಗಂಗಾದೇವಿಯ ಸನ್ನಿಧಾನವಾಗುತ್ತದೆ. ಆ ನೀರಿಗೆ ಕೈಮುಗಿದು ಸ್ನಾನ ಮಾಡಬೇಕು. ಆಮೇಲೆ ಕಚ್ಚೆ ಹಾಕಿಕೊಂಡು ಸೀರೆ ಉಟ್ಟುಕೊಂಡು ಕುಪ್ಪಸವನ್ನು ಹಾಕಿಕೊಂಡು ಅರಿಶಿಣ ಕುಂಕುಮ ಹಚ್ಚಿಕೊಂಡು ಗುರುಮಂತ್ರ ಪ್ರಾರಂಭಿಸಬೇಕು. ಪೂರ್ವಕ್ಕೆ ಅಥವಾ ಉತ್ತರಕ್ಕೆ ಮುಖ ಮಾಡಿಕೊಂಡು ಕೂಡಬೇಕು. ಗೌರಿ ಪೆಟ್ಟಿಗೆಯನ್ನು ತುಳಸಿಯನ್ನು ನಮ್ಮ ಮುಂದೆ ಇಟ್ಟುಕೊಂಡು ದೀಪವನ್ನು ಹಚ್ಚಿಡಬೇಕು. ನಂತರ ಸಂಕಲ್ಪವನ್ನು ಹೇಳಿಕೊಂಡು ನನ್ನ ''ಸಾಧ್ವೀ ಸಾಧನಾದರ್ಶ'' ಪುಸ್ತಕದಲ್ಲಿ ಹೇಳಿದಂತೆ ಗುರುಮಂತ್ರವನ್ನು ಹೇಳಿಕೊಳ್ಳಬೇಕು. (ಮಾಡಿಕೊಳ್ಳಬೇಕು) ಗುರುಮಂತ್ರದಲ್ಲಿ ಅಂಗನ್ಯಾಸ ಬಂದಾಗ ರೇಚಕ, ಪೂರಕ, ಕುಂಭಕವನ್ನು ಮಾಡಿಕೊಳ್ಳಬೇಕು.

ರೇಚಕ ಅಂದರೆ : ಬಲಗಡೆಯ ಮೂಗಿನ ಹೊರಳೆಯನ್ನು ಗಟ್ಟಿಯಾಗಿ ಹಿಡಿದು ಉಸಿರನ್ನು ಎಡಗಡೆಯ ಹೊರಳೆಯಿಂದ ಮೇಲಕ್ಕೆ ತೋಗೆದುಕೊಳ್ಳಬೇಕು.

ಪೂರಕ ಅಂದರೆ : ಬಲಗಡೆಯ ಹೊರಳೆಯಿಂದ ಆ ಉಸಿರನ್ನು ಕೆಳಗೆ ಬಿಡುವದು.

ಕುಂಭಕ ಅಂದರೆ : ಎರಡು ಹೊರಳೆಯನ್ನು ಬಿಗಿಹಿಡಿದು ಉಸಿರನ್ನು ಮೇಲೆ ತೆಗೆದುಕೊಂಡು ''ಶ್ರೀಂ ಕ್ಲೀಂ ಕೃಷ್ಣಾಯನಮಃ'' ಶ್ರೀ ಇದನ್ನು ೧೨ ಸಾರಿ ಇಲ್ಲವೆ ೧೬ ಸಾರಿ ಮನಸ್ಸಿನಲ್ಲಿ ಅಂದುಕೊಳ್ಳಬೇಕು. ಆಮೇಲೆ ಮೂಗಿನ ಬಲ ಹೊರಳೆಯಿಂದ ಉಸಿರನ್ನು ಕೆಳಗೆ ಬಿಡುವುದೇ ಕುಂಭಕ.

ಗುರುಮಂತ್ರ ಮುಗಿದ ಮೇಲೆ ''ಮಂತ್ರ ಹೀನಂ ಕ್ರಿಯಾ ಹೀನಂ ಭಕ್ತಿ ಹೀನಂ ಜನಾರ್ದನ। ಯತ್ ಕೃತಂತು ಮಯಾದೇವ ಪರಿಪೂರ್ಣಂ ತದಸ್ತುಮೆ''॥ ಅಂತಾ ಹೇಳಬೇಕು.

## ನದಿ ಸ್ನಾನದ ವಿಷಯ

ಪ್ರತಿ ತಿಂಗಳು ಒಂದೊಂದು ನದಿಯಲ್ಲಿ ಸ್ನಾನ ಮಾಡಬೇಕೆಂದು ಇದೆ. ೧೨ ತಿಂಗಳು ಅಲ್ಲಲ್ಲಿಗೆ ಹೋಗಿ ಸ್ನಾನ ಮಾಡಲು ಆಗುವದಿಲ್ಲ. ಆದ್ದರಿಂದ ಸ್ನಾನದ ಸಮಯದಲ್ಲಿ ಆ ನದಿಯನ್ನು ಆಹ್ವಾನ ಮಾಡಿಕೊಂಡು ಮನೆಯಲ್ಲಿಯ ನೀರನ್ನೇ ಸ್ನಾನ ಮಾಡಿದರೂ ಆ ಆ ನದಿಯಲ್ಲಿ ಸ್ನಾನ ಮಾಡಿದ ಫಲ ಬರುತ್ತದೆ. ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ನದಿಸ್ನಾನದ ವಿವರ ಹೀಗೆ :

| | ತಿಂಗಳು | ಹುಣ್ಣಿಮೆ | ನದಿ |
|---|---|---|---|
| (೧) | ಚೈತ್ರ | ಚಿತ್ರಾ ಪೂರ್ಣಿಮಾ | ಸರಯೂ ನದಿ (ಹೋಳಿಹುಣ್ಣಿಮೆಯಿಂದ ಚಿತ್ರಾ ಹುಣ್ಣಿಮೆಯ ವ ಮೊದಲನೆಯ ತಿಂಗಳು) |
| (೨) | ವೈಶಾಖ | ಅಗಿ ಹುಣ್ಣಿಮೆ | ಗೋದಾವರಿ |
| (೩) | ಜೇಷ್ಠ | ಕಾರ ಹುಣ್ಣಿಮೆ | ಗಂಗಾ |
| (೪) | ಆಷಾಢ | ಕತ್ತಲಗಡವಿನ ಹುಣ್ಣಿಮೆ | ತಾಪಿ |
| (೫) | ಶ್ರಾವಣ | ನೂಲಹುಣ್ಣಿಮೆ | ತುಂಗಭದ್ರಾ |
| (೬) | ಭಾದ್ರಪದ | ಅನಂತ ಹುಣ್ಣಿಮೆ | ಕೃಷ್ಣಾ |
| (೭) | ಆಶ್ವೀಜ | ಶೀಗಿ ಹುಣ್ಣಿಮೆ | ಸ್ವಾಮಿಪುಷ್ಕರಣಿ |
| (೮) | ಕಾರ್ತಿಕ | ಗೌರಿ ಹುಣ್ಣಿಮೆ | ಕಾವೇರಿ |
| (೯) | ಮಾರ್ಗಶೀರ್ಷ | ಹೊಸ್ತಿಲ ಹುಣ್ಣಿಮೆ | ಯಮುನಾ |
| (೧೦) | ಪುಷ್ಯ | ಬಂದ ಹುಣ್ಣಿಮೆ | ಸರಸ್ವತಿ |
| (೧೧) | ಮಾಘ | ಭಾರತ ಹುಣ್ಣಿಮೆ | ಪ್ರಯಾಗ |
| (೧೨) | ಫಾಲ್ಗುಣ | ಹೋಳಿಹುಣ್ಣಿಮೆ | ಫಲ್ಗುನದಿ |

**ವರ್ಷದ ೧೨ ತಿಂಗಳು ದಾನ ಕೊಡುವ ವಿವರ :**

(ಚಾತುರ್ ಮಾಸದಿಂದ ಪ್ರಾರಂಭ ಮಾಡಬೇಕು)

| | | |
|---|---|---|
| ಆಷಾಢ ಮಾಸ | : | ಆಕಳು, ಭೂಮಿ, ರೇಷ್ಮೆವಸ್ತ್ರ, ತಾಂಬೂಲ, ತಾಮ್ರ, ಬೆಳ್ಳಿ, ತುಪ್ಪ, ಹಾಲು, ದ್ರವ್ಯ. |
| ಶ್ರಾವಣ | : | ವಸ್ತ್ರ, ತುಪ್ಪ, ತುಪ್ಪದ ಪಾತ್ರೆ, ಫಲ. |
| ಭಾದ್ರಪದ | : | ಬೆಳ್ಳಿ, ಬಂಗಾರ |
| ಆಶ್ವೀಜ | : | ಬಂಗಾರ, ಬೆಳ್ಳಿ, ಪಾದರಕ್ಷೆ, ಹಾಲು, ಬೂದಕುಂಬಳಕಾಯಿ, ಮಾದಳದ ಹಣ್ಣು, ಸಾಲಿಗ್ರಾ |
| ಕಾರ್ತಿಕ | : | ದೀಪ, ಗೋಪಿಚಂದನ, ಆಕಳು, ಬಾಳೆಹಣ್ಣು, ನೆಲ್ಲಿ ಪಲ್ಲಾಕ್ಕಿ, ಸಾಲಿಗ್ರಾಮ, ಶಂಖ, ಕುಟುಂಬ ಭೋಜನ |
| ಮಾರ್ಗಶಿರ | : | ನೀರಿನ ಬಿಂದಿಗಿ, ಗೋಪಿಚಂದನ. |
| ಪುಷ್ಯ | : | ಜೋಡು ನೀಲಾಂಜನ, ಬೆಳ್ಳಿ ಬಟ್ಟಲು, ತೆಂಗಿನಕಾಯಿ ೧, ಕಬ್ಬು, ಬೆಲ್ಲ, ಅಕ್ಕಿ, ತೊಗರಿ ಬೇಳೆ, ಉಪ್ಪು, ಎಳ್ಳು, ಹಾಸಿಗೆ, ಸೀರೆ, ಧೋತರ, ಹವಳ, ಮುತ್ತು, ಕ ಮಾಂಗಲ್ಯ. |

| | | |
|---|---|---|
| ಮಾಘ | : | ಕುಷ್ಮಾಂಡ, ಧಾತ್ರಿ, ಶುದ್ಧದ್ವಾದಶಿ, ಮರದ ಬಾಗಿಣ. |
| ಫಾಲ್ಗುಣ | : | ಎಳ್ಳು, ಹಾಲು, ಬ್ಯಾಳಿ. |
| ಚೈತ್ರ | : | ಛತ್ರಿ, ಚಪ್ಪಲಿ, ತುಪ್ಪ ಸಹಿತ ಪಾತ್ರೆ, ಬಾಳೆಹಣ್ಣು, ಗೊ<br>ಪಾನಕ, ಸೌತೆಕಾಯಿ, ನಿಂಬೆಹಣ್ಣು, ಶೆಲ್ಲೆ, ಬೀಸಣಿಕೆ. |
| ವೈಶಾಖ | : | ಮೊಸರು, ಮಜ್ಜಿಗೆ, ಕರ್ಪೂರ, ಕಾಯಿ, ಬಾಳದ ಬೆ<br>ಬೀಸಣಿಕೆ, ಸೇವಂತಿಗೆ ಹೂ, ಕಂಬಳಿ, ಸಂಪಿಗೆ ಹೂ,<br>ತುಪ್ಪ, ತಾಂಬೂಲ, ಶೆಲ್ಲೆ, ಪುಸ್ತಕ. |
| ಜೇಷ್ಠ | : | ಗಂಧದ ಬೀಸಣಿಕೆ, ಅರಿಷಿಣ, ಕುಂಕುಮ. |

# ಪ್ರಸಂಗಾನುಸಾರ ಹೇಳಬೇಕಾದ ಹಾಡುಗಳು

## ಆರತಿ ಹಾಡು

### (ಮಂಗಳಗೌರಿಯ ಹಾಡು)

ಶ್ರಾವಣ ಮಾಸ ನಾಗರ ಪಂಚಮಿ ಶ್ರೀ ಮಂಗಳ ಗೌರಿ ಕರೆಯುದಕೆ। ವೇಗದ ಗಜನೇರಿ ಬಂದನು ಗಿರಿರಾಜ ಗೌರಿ ಕರೆಯುದಕೆ ಜಯ ಜಯ ಮಂಗಳ ।।ಪ।। ಬಂದ ಗಿರಿರಾಜನ ಕಂಡು ಈಶ್ವರನು ಛಂದದಿ ಉಪಚಾರವ ಮಾಡಿದನು।ಇಂದು ನೀವು ಬಂದ ಕಾರಣವೇನೆಂದು ಕೇಳಿದನು ಜಯ ಜಯ ಮಂಗಳ ।।೧।। ಮಂಗಳಗೌರಿಯ ಕಳುಹಿಸಿಕೊಟ್ಟು ಇಂದಿಗೆ ತುಂಬಿತು ಒಂದು ವರ್ಷವು ಚಂದಿರ ಮುಖಿಯನು ಕಳಿಸಬೇಕೆನುತಲಿ ಗಿರಿರಾಜ ಕೇಳಿದನು ।।೨।। ಬೀಸುವ ಗಾಳಿ ಸೂಸುವ ಮಳೆಯು ಪೇಚಾಡುವ ಹೊಳೆ ಹಳ್ಳಗಳು ಯಾ ಕಿಷ್ಟವ ಸರ ಬ್ಯಾಸಿಗಿ ಬರಲಿ ಕಳಿಸುವೆನೆಂತಂದಾ ।।೩. ಮೋಹದ ಮಗಳನ್ನು ನಾ ಹೊತ್ತು ಸಾಕಿ ಮಾರಿದೆನು ನಿನಗೆಂದೆನುತಲಿ ವಾರಿಜ ಮುಖಿಯಳ ಕಳುಹುದಿಲ್ಲೆಂಬುದು ನ್ಯಾಯವು ಈಶ್ವರನೆ ।।೪।। ಬೆಟ್ಟದ ರಜನಿಯ ಸಿಟ್ಟು ಮಾಡಲಿ ಬೇಡಾ ಈ ಕ್ಷಣ ಕರಕೊಂಡು ಹೋಗಿರೆಂದು ಅಪ್ಪಣೆ ಕೊಟ್ಟನು ವಿಳ್ಳೇವ ತಕ್ಕೊಂಡು ನಡೆದಳು ಗೌರಮ್ಮ ಭೀಮೇಶ ಕೃಷ್ಣನ ಮನೆಗೆ ಜಯ ಜಯ ಮಂಗಳ ।।೫।।

## ಶುಕ್ರವಾರದ ಲಕ್ಷ್ಮೀ ಹಾಡು

### (ಲಕ್ಷ್ಮಿಯನ್ನು ಕರೆದದ್ದು)

ಬಾರೇ ಭಾಗ್ಯದ ನಿಧಿಯೆ। ಕರವೀರ ನಿವಾಸಿನಿ।।ಪ।। ಬಾರೆ ಬಾರೆ ಕರವೀರ ನಿವಾಸಿನಿ।।ಬಾರಿ ಬಾರಿಗೆ ಶುಭ ತೋರೆ ನಮ್ಮನೆಗೆ ।।ಅ.ಪ.।। ನಿಗಮ ವೇದ್ಯಳೆ ನೀನು ।। ನಿನ್ನಾ ಪೊಗಳಲಾರೆನೆ ನಾನು।। ಮಗನಪರಾಧವ ತೆಗೆದೆಣಿಸದೆನೀ। ಪನ್ನಂಗವೇಣಿಯೆ ನಡೆ ನಮ್ಮ ಮನೆಗೆ ।।೧।। ಲೋಕಮಾತೆಯೆ ನೀನು। ನಿನ್ನ ತೋಕನಲ್ಲವೆ ನಾನು।। ಆಕಳು ಕರುವಿನ ಸ್ವೀಕರಿಸಿದ ಪರಿ।। ನೀ ಕರುಣದಿ ಕಾತ್ಪಾಕೆ ನಮ್ಮನಿಗೆ।।೨।। ಇಂದು ನಮ್ಮ ನಿವಾಸ।। ನಿನ್ನೊಡೆಯಾನಂತಾದ್ರಿಶಾ।। ವಡೆಯನಿದ್ದಲ್ಲಿಗೆ ಮಡದಿ ತಾ ಬರುವದು।। ನಡತೆಗುಚಿತವಿದು ನಡೆ ನಮ್ಮ ಮನೆಗೇ ।।೩.

## ಲಕ್ಷ್ಮೀದೇವಿ ಮನೆಗೆ ಬಂದದ್ದು

ಬಂದಳು ನೋಡೆ ಮಂದಿರದೊಳು ಭಾಗ್ಯದಾಲಕ್ಷ್ಮಿ ।।ಪ।। ಇಂದುವದನೆ ಮಂದಹಾಸದಿಂದ ನಗುತಲಿ।। ಅಂದಿಗೆ ಕಿರುಗೆಜ್ಜೆರುಳಿಯು ಘಿಲು ಘಿಲ್ಲೆನುತಲಿ।।ಮುದದಿ ಪಾದವಿಕ್ಕುತ

ಪದ್ಮನಾಭನರಸಿಯು ।।೧।। ಎಡಬಲಗಳಲಿ ಗಜದಿಂದ ಪೂಜೆಗೊಳುತಲಿ।। ಬಿಡದೆ ತನ್ನ ಕರಕಮಲದಿಂದ ವರವ ಕೊಡುತಲಿ।೨।। ಸೃಷ್ಟಿಗೊಡೆಯ ತಂದೆ ಜಗನ್ನಾಥ ವಿಠ್ಠಲನ ಪಟ್ಟದರಸಿ ಆರ್ತಿಯಾದ ಭಕ್ತರ ಮನೆಗೆ ।।೩।।

## ಲಕ್ಷ್ಮೀದೇವಿಯನ್ನು ಹಸೆಗೆಕರೆದದ್ದು

ಕಮಲಾಮುಖಿ ಬಾಸುಂದರಿ।ಕಮಲಾಮುಖಿ ರಾಮರಾಜನರಸಿ।।ಭಾಮಿನೀ ಮಣಿಯೆ ವಾಮ ಭಾಗವತಳೆ ।।ಪ।। ಹೆಜ್ಜೆ ಮೇಲೆ ನೀ ಹೆಜ್ಜೆ ನಿಕ್ಕುತಲಿ।। ಗೆಜ್ಜೆಕಾಲ್ ಕಡಗ ಝುಣರೆನ್ನುತಲಿ।ಸಜ್ಜನರೆಲ್ಲಾರು ಸ್ತುತಿ ಗೈಯುವರು। ಮುದ್ದು ಮುಖದ ಲಕ್ಷ್ಮೀ ಹಸಗೇದಯ ಮಾಡೆ।।೧।। ತುಂಬುರ ನಾರದರು ಗಾನ ಮಾಡುವರು। ರಂಭೆ ಮೇನಕೇರು ಪಾಡಿಪೊಗಳುವ್ರೋರು।।ಕುಂಭಿಣಿ।ಸತಿಯರೂ ಪಾಡಿ ಪೊಗಳುವರು। ಕಂಬುಕಂಠೆಲಕ್ಷ್ಮೀ ಹಸೆಗೇದಯ ಮಾಡೆ।।೨।। ಅಕ್ಕರಾದಿಂದಲಿ ಕರೆಯೂವೆ ನಾನು ಶುಕ್ರವಾರದ ಶುಭದಿನದಲ್ಲಿ । ಚಿಕ್ಕ ಮಕ್ಕಳಿಲ್ಲಾ। ನಕ್ಕುನಲಿಯುವರೂ ಅಕ್ಕರಾದಿಂದ ಬಾರೇ।। ತ್ರಿವಿಕ್ರಮನ ಪ್ರಿಯಳೆ।।೩।।

## ಶ್ರೀ ಲಕ್ಷ್ಮೀ ಪೂಜೆ ಹಾಡು

ಪೂಜೆ ಮಾಡೋಣ ಬನ್ನೀರೆ ಶ್ರೀ ಲಕ್ಷ್ಮೀಯ।ಪೂಜೆ ಮಾಡೋಣ ಬನ್ನಿರೆ।ಪೂಜೆ ಮಾಡೋಣ ಬನ್ನಿ ಮುಜ್ಜಗ ಜನನಿಯ।।ರಾಜ ರಾಜೇಶ್ವರಿ ಎನುತ ಶ್ರೀ ಲಕ್ಷ್ಮೀಯ।।ಪ।। ಊರುಶ್ರೀಂಗರವಾಗಲಿ।ಉತ್ತಮ ತಳಿರುತೋರಣ ಕಟ್ಟಲೀ। ನಾರಿ ಲಕ್ಷ್ಮೀಯ ಬರುವ ಸಮಯಕ್ಕೆ।ಕಾಯಿವಡೆದು ಕಡಲಾರುತಿ ಎತ್ತಿರೆ ।।೧।। ಮಿಂದು ಮಡಿಯನುಟ್ಟು ಪೂಜಾದ್ರವ್ಯದಿಂದ।ವಿಪ್ರರ ಕರಸಿ।ಛಂದುಳ್ಳ ದೀಪದ ಸಾಲು ಬೆಳಕಿನಿಂದ।ಇಂದಿರಾಪತಿಪ್ರಿಯೆ ಲಕ್ಷ್ಮೀಯ ಪೂಜೆಯ।।೨।। ಹಸ್ತಪಾದವ ತೊಳೆದು ವಸ್ತ್ರದಲೊರಸಿ ಆಚಮನವ ಮಾಡಿಸಿ ಕತ್ತರಿಸಿದಾ ಅಡಕಿ ಬಳಿ ಎಲೆ ಏಲಕ್ಕಿ ಕಸ್ತೂರಿ ಬೆರೆಸಿದ ಮುತ್ತಿನ ಸುಣ್ಣವನಿಟ್ಟು।।೩।। ಗಂಧ ಅಕ್ಷತೆ ಪುಷ್ಪವು ಗೆಜ್ಜೆವಸ್ತ್ರ ಛಂದಾದ ಅರಿಷಿಣ ಕುಂಕುಮಾ।ಅಂದದ ಕರಿಮಣಿ ಬಿಚ್ಚೋಲೆ ಬಳಿಯ ನಿಟ್ಟು।ಮಂದಾರ ಮಲ್ಲಿಗೆ ಮಾಲೆಯ ಮಾಡಿಸಿ।।೪।। ಮಂದಾರ ಶೇವಂತಿಗೆ ಜಾಜಿ ಪುಷ್ಪವ ತಂದು ಕೇದಿಗೆಗಳನು।ಛಂದುಳ್ಳ ಮರಗುದವನ ಪುನ್ನಾಗವನ್ನು ಅಂಬೆ ಸಮರ್ಪಿಸುವೆ ಇಂದು ಸ್ವೀಕರಿಸಮ್ಮ ।।೫।। ಸಾಲು ದೀವಿಗೆಯ ಹಚ್ಚಿ ಪುಷ್ಪಗಳಿಂದ।ಶ್ರೀಲಕ್ಷ್ಮೀಯ ಪೂಜಿಸಿ।ಪಾಲು ಮಾಡಿದ ಕಾಯಿಫಲಗಳು ಅರ್ಪಿಸಿ ದುಂಡುಮಲ್ಲಿಗೆ ಹೂವಿನ ದಂಡೆಯ ಮುಡಿಸಿ।।೬।। ಹೋಳಿಗೆ ಹೊಸ ಬೆಣ್ಣೆಯ ಕಾಸಿದ ತುಪ್ಪ ಸಾರು ಸಾಸಿವೆಗಾಯಿಯು ವೇಣು

ಗೋಪಾಲಶ್ರೀಕೃಷ್ಣನೊಲ್ಲಭೆ ನೀನು ಆ ಹರಿಯೊಡಗೂಡಿ ಆರೋಗಣೆಯ ಮಾಡು॥೭॥ ತಾಂಬುಲವನ್ನು ಕೊಡುವೆ ಅಂಬುಜ ಪಾಣಿ ಮಂಗಳದಾಯಕಿಯೆ॥ ಹಿಂಗದೆ ಸೌಭಾಗ್ಯವನ್ನು ಕೊಟ್ಟು ಮಗಳೆಂದು ಮುಂದೆ ಕರೆದು ಎನ್ನ ಕಂದಳೆಂದು ಕಾಯೇ॥೮॥ ನಿತ್ಯಪ್ರದಕ್ಷಣೆಯಾ ನಮಸ್ಕಾರ ಚಿತ್ತದೊಲ್ಲಭೆ ನಿನಗೆ ಅಪ್ಪಹರಿಗೆ ಪೇಳಿ ಅಖಿಳ ಪದವಿಯನ್ನು ವಪ್ಪಿಸಮ್ಮ ಭೀಮೇಶ ಕೃಷ್ಣನ ಮಡದಿ ॥೯॥

## ಪೂಜೆಯ ಹಾಡು

ಇಂದಿರೆ ನಿನ್ನ ಪೂಜೆ ಇಂದು ಮಾಡುವೆನು ನಾನು।ಮಂದಹಾಸದಿ ಮೋದದಂದಲ್ಲೆ ನೋಡುತ ಹರಿಯಾ॥ಪ॥ ಮಂದಾರ ಮಲ್ಲಿಗಿ ಕುಂದಾರ ಕುಸುಮಗಳನ್ನು॥ತಂದೂ ನಿಂತಿರುವೆನು ಸುಂದರ ಸರಸಿಜೆ ಮುಡಿಯೆ।೧॥ಜರದ ಪೀತಾಂಬರ ಕರದಲ್ಲೆ ತಂದಿರುವೆ॥ಎರಕೊ ಹರಿಯ ಕೂಡ ಸರಸಿಜದಳ ನೇತ್ರೆ ।೨॥ ಹರಡಿಕಂಕಣಗುಂಡು ಹೆರಳು ಬಂಗಾರವನ್ನು॥ಹರುಷಾದಿಂದಲ್ಲಿ ಕೃಷ್ಣನ್ನರಸಿ ತಂದಿಹೆ ನಿನಗೆ॥೩॥ಗಂಧಾಕುಂಕುಮ ವೀಳ್ಯಾ॥ಬುಂದ್ಯೆ ಭಕ್ಷಗಳನ್ನು ಬಂದು ಹರಿಯ ಕೂಡಾನಂದದಿಭುಂಜಿಸು ಬೇಗ॥೪॥ಚಂದ್ರಶೇಖರ ಸುರವಂದಿನ ಚರಣೆ॥ ಇಂದಿರೇಶನ ಕೂಡ ಬಂದಿಲ್ಲಿ ತೋರಿಸು ಮುಖವನು।೫॥

## ಬಳೆ ಇಡಿಸಿದ್ದು

ಬಳಿಯನಿಡಲು ಬಂದ ಬಳೆಗಾರನು।ಮುತ್ತು ಮಾಣಿಕ್ಯದ ಪೆಟ್ಟಿಗೆಯೊಳಗೊಪ್ಪುವ ಅಚ್ಚ ನೀಲದ ಬಳೆಗಳ ನಿಬಟ್ಟು ಮಿತ್ರರ ಮನಸು ವಲಿಸಬೇಕೆನುತಲಿ ಕುಸುಮನಾಭನು ಬಳೆಗಾರ ನಾದ ।೧॥ ರಂಗು ಮಾಣಿಕ್ಯದ ಪೆಟ್ಟಿಗೆಯೊಳಗೊಪ್ಪುವ ಜಂಬುನೀಲದ ಬಳೆಗಳನಿಂಬಿಟ್ಟು।ರಂಭೆರ ಮನಸು ವಲಿಸಬೇಕೆನುತಲಿ ರಂಗರಾಯನು ಬಳೆಗಾರ ನಾದ॥೨॥ಹಸಿರು ಹಂಗನ ಗರಿ ಜೇನುತುಪ್ಪದ ಬಳಿ ಕುಸಲದ ಕುಂದಣದ ಹಸಿರುವ ಬಳಿ ಹೊಸ ಪರಿ ಬಳೆಗಳ ಇಡುವೆನೆಂದನುತಲಿ ಶ್ರೀಕೃಷ್ಣರಾಯನು ಬಳೆಗಾರನಾದ॥೩॥

## ವರಮಹಾಲಕ್ಷ್ಮೀಯ ಪೂಜೆಯ ಹಾಡು

ಪೂಜೆ ಮಾಡೋಣ ಬಾ ವರಲಕುಮಿಯ।ಪೂಜೆ ಮಾಡೋಣ ಬಾ॥ಪ॥ ಗಂಧದೆಣ್ಣೆ ಕುಂದಣದೆಣ್ಣೆ ಛಂದವಾದಪೂಗಳೆಣ್ಣೆ॥ಸುಂದರಾಂಗಿ ಮೈಗೆ ಪೂಸಿ ಆನಂದದೊಳಗೆ ಅಭ್ಯಂಗ ನೀಡೋಣ॥೧॥ ಗಂಗೆ ಯಮುನೆ ಕೃಷ್ಣವೇಣಿ ತುಂಗವರದ ನದಿಯ ಜಲವ॥ ಪೊಂಗಲಶದಿತುಂಬಿ ರಂಗನಂಗನಿಯಳ ನೆರೆದು ಬೇಗ॥೨॥ ಗಂಧ ಕುಂಕುಮಾಂಕಿತ ಪರಿಮಳದಿಂದ ಅರಿಷಿಣವನ್ನು ಶಿರಿಗೆ॥ಹೊಂದಿಸಿ ಪೊಂದೆಡೆಗಳನ್ನು॥ಇಂದು ನೋಡಿ

ಕಣ್ಣತುಂಬ॥೩॥ ಛತ್ರಚಾಮರ ವ್ಯಜನ ರೂಪ ಪಾತ್ರದೊಳಗೆ ಶಿರಿಯನಿರಿಸಿ॥ ಛತ್ರಚಿತ್ರ ಕುಸುಮ ಮಾಲೆ ಪತ್ರವಿಟ್ಟು ಕರವ ಮುಗಿದು॥೪॥ ದೀಪಧೂಪ ಸಾಲುಗಳನ್ನು ಸೌಪರಾಧ್ಯಡಬಲದಲಿಟ್ಟು॥ ಶ್ರೀಪತಿ ರಮಣಿಯಳಿಗೊಲಿದು ಪೂರ್ಣಾದಿ ಶ್ರೀಹರಿಯ ನೆನೆದು॥೫॥ಭಕ್ಷಪಾಯಿಸಕಲಸಾನ್ನವ ಅಕ್ಷಯ ಪಾತ್ರದೊಳು ಬಡಿಸಿ॥ಲಕ್ಷ್ಮೀದೇವಿಗೆ ಅರ್ಪಿಸಿ ಕರಕುಕ್ಷಿಯೊಳಿಟ್ಟು। ಬೇಡಿಕೊಂಬೆ॥೬॥ ಹಾಸುಮಂಚದೊಳಗೆ ಹರಿಯು ಪಾರ್ಶ್ವದೊಳಗೆ ಶಿರಿಯನಿರಿಸಿ॥ಕೇಶರಾ ಕರ್ಪೂರಮಯಸುವಾಸಿತ ತಾಂಬುಲ ಕೊಟ್ಟು॥೭॥ಮುತ್ತು ರತ್ನ ವಜ್ರದಿಂದ ಕೆತ್ತಿದಾ ಹೊನ್ ತಾಟನಲ್ಲಿ ಇಟ್ಟು ಚಂದ್ರಕಾಂತೆ ಜೋಡು॥ಎತ್ತಿ ತೂಗಿ ಬೆಳಗಿ ಪಾಡಿ॥೮॥ಪ್ರತಿಜನ್ಮ ಜನ್ಮದಲಿ ಶ್ರೇಷ್ಠ ಪತಿ ಸೌಭಾಗ್ಯ ಕೊಟ್ಟು॥ಸಂಪತ್ತುಗಳ ಕೊಡುವ ಭೀಮೇಶ ಕೃಷ್ಣನ ಸತಿಯಳ ।೯॥

## ಅಷ್ಟಮಿ ಗೌರಿ ಆರತಿ ಹಾಡು

ಅಷ್ಟಮಿ ಗೌರಿ ಪೂಜೆ ಮಾಡಿದಳ ಸುಭದ್ರಾ ಅಚ್ಚಮುತ್ತಿನ ಆರುತಿ ಎತ್ತೊಳು॥ಪ॥ ಅಚ್ಯುತಾನ ದಯಾದಿಂದ ಅತಿ ಭಕ್ತಿಯಿಂದಭದ್ರಿ ಮುತ್ತಿನಾರುತಿ ಎತ್ತಿ ಬೆಳಗೊಳು ಮುತ್ತೈದಿತನವ ಪಡೆದಳು॥ಅಪ॥ಕ್ಷತ್ರಿಯರು ಚೈಸಿಬರುವರೂ ಪಾಂಡವರಿಗೆ ಅಪಮೃತ್ಯುಬರಲು ಅಂಜಿಹೋಗಲು॥ಮುತ್ತಿನಾರುತಿ ಎತ್ತಿ ಬೆಳಗೊಳು ಮುತ್ತೈದಿತನವ ಪಡೆದಳು॥೧॥ ಇಂದ್ರನಂದನನ ಸತಿಯು ಸೂಭದ್ರಾಮಿಂದುಮಡಿಯನುಟ್ಟು ಬಂದಳು॥ಗಂಧಕುಂಕುಮ ಪರಿಮಳದ ವಸ್ತ್ರಭಂದದಿಂದ ದೀಪ ಧೂಪ ದುಂಡುಮಲ್ಲಿಗೆ ಮಾಲೆ ಮುಡಿಸಿ ಮಂಗಳಾರುತಿ ತಂದು ಬೆಳಗೋಳು।೨॥ ಭಗಿನಿ ಕೇಳೆ ಭಾವಶುದ್ಧದೀ ಭಾದ್ರಪದ ಶುದ್ಧ ಅಷ್ಟಮಿ ಗೌರಿ ಕಥೆಯನು॥ದೊರೆಯು ಹಿರಿಯ ಹೆಂಡತಿಯಾಪುರದ ಹೊರಗ ಇಟ್ಟಿರಲು ಶಿರಿದೇವಿ ಧಾರಕಟ್ಟಿ ಹರಿಯುವಲಿದಶಿರಿಯು ಬಂತು॥೩॥ಪಂಚಬಾಣನ ಪಿತಗ ನಮಿಸೊಳು ಸುಭದ್ರಾ ಮುಂಚೆ ಕರವ ಮುಗಿದು ಎತ್ತೊಳು॥ಪಾಂಚಾಲಿ ಧೊರೆಗಳು ಸಹಿತ ವನದ ವಳಗ ದಿನವ ಕಳೆಯ ಆಗ ವನವಾಸವನ್ನು ಗೆದ್ದು ಬರುವ ತೆರನ ನೋಡ॥೪॥ ಪಂಚಭಕ್ಷ ಪಾಯಸ ಘೃತಗಳೂ ಹೆಳವನಕಟ್ಟಿರಂಗನ ಸತಿಗೆ ಮುಂಚೆ ಎಲಿಯ ಹಾಕಿ ಬಡಿಸೋರು॥ಶಂಕರ ಗಂಡನ ಕಥೆಯ ಕೇಳಿ ಕಂಕಣ ಕೈಗೆ ಧಾರ ಕಟ್ಟಿ ಪಂಕಜಾಕ್ಷನಾಭನ ತಂಗಿ ಶಂಕೆ ಇಲ್ಲದೆ ಭಾಗ್ಯವ ಪಡೆದಳು ।೫॥

(ಈ ಎಲ್ಲ ಹಾಡುಗಳನ್ನು ಶ್ರಾವಣದಲ್ಲಿ ಗಡಗಿ ಗೌರಿ ಕೂಡಿಸಿದಾಗ ಹಾಡಬೇಕು ಮತ್ತು ಅಷ್ಟಮಿ ಗೌರಿ ಕೂಡಿಸಿದಾಗಲೂ ಹಾಡಬೇಕು).

## ಶೀಗಿಯ ಹಾಡು

ಅರಿಷಿಣ ಹಚ್ಚಿರೆ ಅರಸಿ ಗೌರವ್ವಗೆ ಅರಸ ಮಾಲಿಂಗನ ಮಡದಿಗೆ ಕೋಲೇನ ಕೋಲ॥
ಅರಸ ಮಾಲಿಂಗನ ಮಡದಿ ಗೌರವ್ವಗೆ ಅರಿಷಿಣ ಹಚ್ಚ ಬನಾತೇರ ಕೋಲೇನಕೋಲ॥
ಕುಂಕುಮ ಹಚ್ಚಿರೆ ಕಾಂತಿ ಗೌರವ್ವಗೆ ಕಾಂತ ಮಾಲಿಂಗನ ಮಡದಿಗೆ ಕೋಲೇನ ಕೋಲ॥
ಕಾಂತಮಾಲಿಂಗನ ಮಡದಿ ಗೌರವ್ವಗೆ ಕುಂಕುಮ ಹಚ್ಚಬನಾತೇರ ಕೋಲೇನ ಕೋಲ॥
ಶೀರಿ ಉಡಿಸಿರೆ ಸಾರಿ ಗೌರವ್ವಗ ರಾಯ ಮಾಲಿಂಗನ ಮಡದಿಗೆ ಕೋಲೇನ ಕೋಲೆ॥
ರಾಯಮಾಲಿಂಗನ ಮಡದಿ ಗೌರವ್ವಗ ಶೀರಿ ಉಡಸಬನಾತೇರ ಕೋಲೇನ ಕೋಲೆ॥
ಕುಬಸಾ ತೊಡಿಸಿರೆ ಅಕ್ಕ ಗೌರವ್ವಗ ಶೃಷ್ಟಿಗೀಶ್ವರನ ಮಡದಿಗೇ ಕೋಲೇನ ಕೋಲೆ॥
ಸೃಷ್ಟಿಗೀಶ್ವರನ ಮಡದಿ ಗೌರವ್ವಗ ಕುಬಸಾ ತೊಡಸ ಬನಾತೇರ ಕೋಲೇನ ಕೋಲೆ॥

## ಆರತಿ ಹಾಡು

ಆರುತಿ ಬೆಳಗುವೆನ ಗೌರಿಗೊಂದ ಆರುತಿ ಬೆಳಗುವೆನ ಆರಾರುಳ್ಳ ಶೀಗಿಯ ಗೌರಿಗೊಂದು ಆರತಿ ಬೆಳಗುವೆನ॥ಪ॥ ಹಣ್ಣಿನಾರುತಿನೋಡ ಇದು ನಮ್ಮ ಹುಣ್ಣಿಮೆ ಗೌರಗೆ ಬನ್ನಿಯ ಮುಡಿಯೆ ಗೌರಿವ್ವ ತಾಯಿಗೊಂದಾರುತಿ ಬೆಳಗುವೆನ॥ ಹಿಟ್ಟಿನಾರುತಿ ನೋಡ ಇದು ನಮ್ಮ ವಿಠ್ಠಲ ಗೌರಿಗೆ ಮಲ್ಲಿಗಿ ಮುಡಿಯೆ ಗೌರವ ತಾಯಿಗೊಂದಾರುತಿ ಬೆಳಗುವನ।೧॥ಸಾರಾವಳಿ ಉಡಿಸುವೆನ ಗೌರಿ ನಿನಗಸರದ ಮುತ್ತು ಕಟ್ಟುವೆನ ಬಾಲರ ಎತ್ತಿಕೊಂಡು ನೀಲದ ಆರುತಿ ಭಾಗ್ಯದಿ ಬೆಳಗುವೆನ।೨॥ಕೋಲು ಕೋಲೆನ್ನ ಕೋಲ ಮುತ್ತಿನ ಕೋಲು ಕೋಲೆನ್ನ ಕೋಲ ಕೋಲನಾಡೋಣ ಬನ್ನಿ ಬಾಲವೆಂಕಟಪತಿ ಲೀಲೆ ಕೊಂಡಾಡುತಲಿ।೩॥

## ಗೌರಿ ಹುಣ್ಣಿಮೆ ಗೌರಿ ಹಾಡು

ಆರುತಿ ಬೆಳಗಿರೆ ಪಾರ್ವತಿಗೆ ಗಿರಜಕಲ್ಯಾಣಿಗೆ ಗೀರ್ವಾಣಿಗೆ ಆರುತಿ ಬೆಳಗಿರೆ ಪಾರ್ವತಿಗೆ॥ಪ॥ಮುತ್ತಿನ ಆರುತಿ ರತ್ನದ ಆರುತಿ ಮುತ್ತೈದಿತನಕೆ ಸ್ಥಿರವೆನ್ನಿರೆ ಮುತ್ತೈದಿತನವು ಸ್ಥಿರವಿರಲೆಂದು ಮುತ್ತೈದೆರೆಲ್ಲಾ ಪಿಡಿದೆತ್ತಿರೆ।೧॥ ಹವಳದ ಆರುತಿ ಪವಳದ ಆರುತಿ ಹರದಿಯರೆಲ್ಲ ಪಿಡಿದೆತ್ತಿರೆ ಹರಿದಿಯರೆಲ್ಲಾ ಪಿಡಿದೆತ್ತಿದಾರುತಿ ಸಾವಿತ್ರಿತನವು ಸ್ಥಿರವಿರಲೆಂದು।೨॥ಚಿನ್ನದ ಆರುತಿ ರನ್ನದ ಆರುತಿ ರಂಭೆಯರೆಲ್ಲ ಪಿಡಿದೆತ್ತಿರೆ ರಂಭೆಯರೆಲ್ಲ ಪಿಡಿದೆತ್ತಿದಾರುತಿ ಮಂಗಳಸೂತ್ರವು ಸ್ಥಿರವಿರಲೆಂದು।೩॥

## ಹೂಮುಡಿಸಿದ್ದು ಹಾಡು

ಪಾಲಿಸಮ್ಮ ನೀನು ಪಾರಿಜಾತವನ್ನು।ಕೋಮಲೆ ವರನ್ನು ಬೇಡಿಕೊಂಬೆ ನಾನು॥ಪ॥ ಹೆಕ್ಕಿದಂತ ಹೆರಳು ಮಲ್ಲಿಗಿಯ ಅರಳು।ಜಗವ ಮೋಹಿಸುವಳು ನಮ್ಮನ್ನು ರಕ್ಷಿಸುವಳು॥೧॥ ತಾಯೇ ತ್ರಿಪುರಾ ಸುಂದರೀ ಕಾಯೆ ಗಜಗೌರಿ ವರುಣನ ಕುಮಾರಿ।ಮುರಹರಿಯ ಅರಸಿ।೨॥ವೆಂಕಟೇಶನರಸಿ ಬೇಡಿಕೊಂಬೆ ಸ್ಮರಸಿ॥ಪುಷ್ಪವನ್ನು ಬೆರೆಸಿಕೊಡು ನಮ್ಮನು ಕರೆಸಿ॥೩॥

## ನೈವೇದ್ಯದ ಹಾಡು

ಆರೋಗಣೆ ಮಾಡಂಬುಜನಯನೇ॥ ಸಾಮವೇದಸದನೇ॥ ಮಾರನಜನನಿಯೆ ಮಧುಸೂದನಪ್ರಿಯೆ॥ ಕಾಮಿತಫಲದಾಯೆತಾಯೇ॥ಪ॥ ಶುದ್ಧ ಸ್ನಾನವ ಮಾಡಿ ಸುದತೆರು ಮುದದಿಂದ॥ಶುಭ್ರ ವಸ್ತ್ರವ ಉಡಿಸಿ ಲಕ್ಷ್ಮೀಗೆ ತಿದ್ದಿ ತಿಲಕನಿಟ್ಟು ತೀವ್ರದಿ ಲಕ್ಷ್ಮೀಯ॥ ವಜ್ರಮಾಣಿಕದ ಮಂಟಪದಿ ಕುಳ್ಳಿರಿಸೊರು।೧॥ಉಪ್ಪು ಉಪ್ಪಿನಕಾಯಿ ಹಪ್ಪಳ ಸಂಡಿಗಿ ಚಕ್ಕುಲಿಕರಚಿಕಾಯಸು॥ಅಷ್ಟು ಜೀನಸಿನ ಭಕ್ಷಂಗಳ ಬಡಿಸೆದ ಸರ್ಪಶಯನನ ರಾಣಿ ಭುಂಜಿಸು ಬೇಗನೆ।೨॥ಮೀಸಲು ಮಂಡಿಗಿ ಸೂಸಲು ಎಣ್ಣೋರಿಗಿ ದ್ರಾಕ್ಷಿಯು ನವನೀತಾ ಮೊದಲಾದ ಕಾಸಿದ ತುಪ್ಪಾ ಕೆನಿಮಸರು ಮಧು ಕ್ಷೀರಾ॥ಮೀಸಲ ದಡಿಗಿಸುವಾಸನಿಯರು ಬಡಿಸ್ಯಾರ॥೩॥ ನಿರಾಹಾರದಿಂದಲಿ ಮಾಡಿದ ಅಡಿಗೆಯಾ ಲಲನೆರು ತಂದು ಬಡಿಸೋರು ಪುಡಿ ಎಣ್ಣೋರಿಗಿ ಸಿಬಿಯದ ಉಂಡಿಯ ಭೀಮೇಶ ಕೃಷ್ಣನ ಮಡದಿಗೆ ಬಡಿಸ್ಯಾರ॥೪॥

## ಆರತಿ ಹಾಡು

ಜಯತು ಕೃಷ್ಣನ ಪಟ್ಟದ ರಾಣಿಗೆ ಜಯತು ಮಹಾಲಕ್ಷ್ಮಿಗೆ ಜಯತು ಶೃಷ್ಟಿಯ ಸಲಹುವ ತಾಯಿಗೆ ಜಯತು ಮಹಾಲಕ್ಷ್ಮೀಗೆ ಜಯ ಜಯ ಮಂಗಳ ॥ಪ॥ ಕಾಲಕಡಗ ಕೀಲುಕುಳಿಯು ಕಾಲುಂಗರ ತಾನಿಟ್ಟಹಳ।ಲೋಲಮುದ್ರಿಕೆ ಕಿರಿಪಿಲ್ಲುಂಗುರ ಕಾಲುಂಗರ ತಾಹೊಳೆಯುತಲಿ।೧॥ ಎಂಟರಬು ಗುಡಿ ಗೊಂಚಲ ಮುತ್ತು ಕಂಠಾಭರಣನಿಟ್ಟಹಳ॥ ಕಂಠಿ ಸರಪಳಿ ಕೊರಳಲ್ ಹೊಳೆಯುತ ವಂಕಿತೋಳ್ ತಿರುವುತಲಿ।೨॥ಚೌರಿರಾಗುಟಗೊಂಡೆ ಹೆರಳು ಬಂಗಾರವು ಬುಗುಡಿ ಬಾವುಲಿ ಹೊಳೆಯುತಲಿ॥ಸಡಗರದಿಂದಲಿ ಕುಡಿಕುಂಕುಮಹಚ್ಚಿ

ಪಡೆಯ ಎಂಕೋಬನ ಪ್ರೀಯಳೆ॥೩॥ಗೀರು ಗಂಧ ದ್ವಾರಬಳಿಯು ಪಾರಿತುರು ಬು ಕಟ್ಟಿಪಳ। ನಾರದಮುನಿ ತಂದ ಪಾರಿಜಾತ ಹೂ ಸೋಲು ಮುಡಿಗೆ ತಾ ಮುಡುದಿಪಳ॥೪॥ ಹೊನ್ನವೃಂದಾವನದ ವಳಗೆ ಚನ್ನಾಗಿ ತಾ ಕುಳುತಿಹಳ।ಚಿನ್ಮಯ ಮೂರುತಿ ಪ್ರಸನ್ನ ವೆಂಕಟೇಶನ ಕೊರಳಗೆ ಮಾಲೆಯನ್ಹಾಕಿಪಳ।೫॥

## ವರ ಬೇಡಿದ್ದು

ಬೇಡುವೆನಾ ಲಕ್ಷ್ಮೀ ನಿನ್ನ ನೀಡೆ ವರಗಳ॥ಪಲ್ಲ॥ಇಷ್ಟು ಕಾಲದಿಂದ ನಿನ್ನ ಪುಟ್ಟಪಾದವ।ಮುಟ್ಟಿ ಭಜಿಸುವೆ ನಾನು ಶ್ರೀಕೃಷ್ಣನರಿಸಿಯೆ॥೧॥ತರುಣಿಯರಿಗೆ ವರವ ಕೊಡೆ ತಡವ ಮಾಡದೆ।ಕರುಣದಿಂದ ಕರೆದು ಎನ್ನ ವರವ ಪಾಲಿಸೆ।೨॥ನಿನ್ನ ಹೊರತು ಜಗದೊಳು ಅನ್ಯರ ಕಾಣೆ।ಎನ್ನ ಪಾಪ ಪರಿಹರಿಸೆ ಶ್ರೀಕೃಷ್ಣನರಿಸಿಯೇ।೩॥

## ಅನಂತ ಚತುರ್ದಶಿಯ ದಿನ ಅನಂತ ಪದ್ಮನಾಭನಿಗೆ ಆರತಿ ಮಾಡಿದ್ದು

ಮಂಗಳಾರುತಿಯ ತಂದೆತ್ತಿರೆ।ಮಂಗಳ ಮಹಿಮ ಶ್ರೀಮದಾನಂತನಿಗೆ॥ಪ॥ಎಲ್ಲವರ ತೋರುಬಾರೆಂದು ಮುನೀಶಗೆ ಮೆಲ್ಲಮೆಲ್ಲನೆ ಕರವ ಪಿಡಿದಾ॥ಇಲ್ಲೆಯಿರ್ಪನು ಪದ್ಮನಾಭನಾ ನೋಡೆಂದು॥ ನಿಲ್ಲದೆ ಮಾಯವಾದನು ಹರಿಯು॥೧॥ ಶೇಷನ ಹಾಸುಕಿ ಮೇಲೆ ಹರಿಗೆ॥ಸರ್ವೇಶ್ವರಿ ಚರಣವ ನೊತ್ತುತಿರೆ॥ದಾಸರು ಕೆಲದಲಿ ಸ್ತೋತ್ರವ ಮಾಡುತಲಿರೆ॥ ವಾಸು ದೇವರ ಕಂಡನು ಮುನಿಯು॥೨॥ ಹಸಿವಿನಿದ್ರಿ ತೊರೆದ ರಸಮುನಿಪನ॥ ಶುದ್ಧ ಹೃದಯದಿ ಕಂಡನು ದೇವನು॥ಭೀಮೇಶ ಕೃಷ್ಣನ ರೂಪವ ತೋರುತಲಾಗ॥ ವೃದ್ಧ ಬ್ರಾಹ್ಮಣನಾಗಿ ಬಂದು ನಿಂತಾ ॥೩॥

## ತುಳಸಿಗೆ ಆರತಿ ಮಾಡಿದ್ದು

ಎತ್ತಿದಳಾರುತಿಯಾ ಶ್ರೀ ತುಳಸಿಗೆ॥ಭಕ್ತಿಭಾವಗಳಿಂದಲಿ॥ಪ॥ಎತ್ತಿದಳಾರುತಿ ಸತ್ಯಪಾಂಡವರ ಸತಿ॥ಅಚ್ಯುತನ ತೋರೆಂದು ಅತಿ ದೈನ್ಯದಿಂದಲಿ॥ಅ.ಪ.॥ಗಂಧ ಕುಂಕುಮ ಕೇಯಾರ॥ ಪಾಂಚಾಲಿಯು ವೃಂದಾವನವ ಪೂಜಿಸಿ॥ದುಂಡುಮಲ್ಲಿಗಿ ಕರ್ಪೂರ ದೀಪ ಧೂಪಗಳಿಂದಾ॥ ಇಂದ್ರನಂದನ ಸತಿ ವಂದೇ ಮನಸಿನಿಂದ॥೧॥ಕೇಯೂರ ಹಾರಗಳೂ ಮುಕ್ತಾವಳಿ ನಾರಿ ತುಳಸಿಗೆ ಅರ್ಪಿಸಿ॥ಚಾರು ಹಸ್ತಗಳಿಂದ ನಾರಿ ಭಗಸಿ ವಡ್ಡಿ ವಾರುಜ ನಾಭನ ತೋರೆಂದು ಶ್ರೀ ತುಳಸಿಗೆ ॥೨॥ ಅನ್ನ ಬೇಡಲು ರುಷಿಗಳು ಪತಿಗಳು ಬಂದು ಎನ್ನನ್ನೆ ಕಾಡುವರು॥

ಪನ್ನಂಗವೇಣಿನಾ ನಿನ್ನ ಮರೆಯ ಹೊಕ್ಕೆ ಪನ್ನಾಂಗಶಯನನಾ ತೋರೆಂದು ಶ್ರೀ ತುಳಸಿಗೆ॥೩॥ ಕ್ಷೀರದಿಂದಾದವರು ತಪಸಿಗಳೆಂದು ಪತಿಗಳು ಹೇಳಿದರು॥ಶ್ರೀಪತಿದಾಯಕಿ ನಿನ್ನಪತಿ ಶ್ರೀಕೃಷ್ಣನ್ನ ಅಚ್ಯುತಾನಂತನಾ ತೋರೆಂದುಶ್ರೀ ತುಳಸಿಗೆ॥೪॥ಬೇಡಿದ ಭಕ್ತರಿಗೆ ಶ್ರೀ ತುಳಸಿಯು ಸಾಯುಜ್ಯ ಪದವಿ ನೀಡಿ॥ ವಾರಿಜನಾಭನಾ ತೋರುವೆನುತಲಿ ತೋರಿದಳ್ ಧೀರ ಶ್ರೀಕೃಷ್ಣನ ತಂಗಿಗೆ॥೫॥

## ದೀಪಾವಳಿ ದಿನ ಎಣ್ಣೆ ಶಾಸ್ತ್ರ ಮಾಡಿದ್ದು

ಕಾರ್ತಿಕ ಮಾಸದಲಿ ಕಾಮನ ಪಿತನ ಪೂಜಿಸುವಾ॥ಪ॥ಮಾಸಾಭಿಮಾನಿ ದಾಮೋದರನ್ನ ಭಜಿಸಿ ಲೇಸು ಸಂಪಿಗಿ ಗಂಧಣ್ಣೆ ಸಮರ್ಪಿಸಿ॥ಆ ಪುಣ್ಯ ಪುರುಷೋತ್ತು ಮನ ಕೊಂಡಾಡುತಾ ತೈಲಶಾಸ್ತ್ರ ಪದವ ರಚಿಸುವೆ ॥೧॥ ಪುಣ್ಯಸಾಧನದ ಜನರೆಲ್ಲಾ ತಾವ್ ಬ್ರಾಹ್ಮಿ ಮುಹೂರ್ತದಲೆ ಎದ್ದು ಕಸ್ತೂರಿಕರಪುರದ್ವಿಳ್ಯವನಿಟ್ಟು॥ ಪನ್ನಂಗಶಯನಗ ಗೋಪಿ ಚಿನ್ನಗಾ ಹಚ್ಚಿದರು ಗಂಧೆಣ್ಣೆ॥೨॥ ಸೃಷ್ಟಿಗೆ ಕರ್ತ ಶ್ರೀಹರಿಯುತಾ ಸೃಷ್ಟಿಸಿದನು ದೀಪಾವಳಿಯಾ॥ಉತ್ತಮ ಚತುರ್ದಶಿ ದಿನದಲಿ ಬಂದು ಮತ್ತೆನರಕಾಸುರನಾ ವಧೆಯ ಮಾಡಿದನೆಂದು ರುಕ್ಮಿಣಿ ಹಯವದನನ ನೆತ್ತಿಗೆ ಹಚ್ಚಿದಳು ಸಂಪಿಗೆಣ್ಣೆ ॥೩॥

## ಶ್ರಾವಣ ಮಾಸದ ಶನಿವಾರ ಗೌರಿ ಹಾಡು

ಆರುತಿಯ ಮಾಡುವೆವು ಲಕ್ಷ್ಮೀ ದೇವಿಗೆ। ಸಾಹೆಕ್ಕ ದೇಹಕ್ಕಗೆ ಸಂಪತ್ತು ಕೊಟ್ಟ ಲಕ್ಷ್ಮೀದೇವಿಗೆ॥ಪ॥ಸೋಮಕಾಂಟೆ ಪೂಜೆ ಮಾಡಿ ಭುಂಜಿಸುತಿರಲು॥ರಾಜನರಸಿ ಅಡಿಗೆ ಕಂಡು ನಿಂದ್ಯ ಮಾಡಿದಳೂ॥೧॥ನಿಂದ್ಯ ಮಾಡಿದ ಕಾರಣದಿಂದ ರಾಜ್ಯ ಹೋಗಲು॥ ಅಡವಿಯೊಳಗೆ ಎರಡು ಶಿಶುವು ಪೆತ್ತು ವನಕೆ ನಡೆದಳು।೨॥ಸೋಮೇಶ ಭಟ್ಟ ತುಳಸಿಗೆಂದು ವನಕೆ ಬಂದನೂ॥ಎರಡು ಮಕ್ಕಳ ಎತ್ತಿಕೊಂಡು ಮನೆಗೆ ಪೋದನು।೩॥ ರಾಜಮಂತ್ರಿಗಳಿಗೆ ಮದುವೆ ಮಾಡಿಕೊಟ್ಟನು।ರಾಜನರಸಿ ದೇಹಕ್ಕ ಗೌರಿಯನ್ನೆ ಮರೆತಳು।೪॥ ಸಾಹಿಕ್ಕನಾ ಮನೆಗೆ ಬಂದು ಭೀಮೇಶನ ಕೃಷ್ಣನ ಸತಿಯ ಪೂಜಿಸಿ।ಮರಳಿ ತಮ್ಮ ರಾಜ್ಯ ಪಡೆದರು।೫॥

